ಕಾಯಕವೇ ಕೈಲಾಸ



# ಸಿದ್ಧಗಂಗಾ



ಮಕರ ಸಂಕ್ರಾಂತಿ ಹಾಗೂ
ಗಣರಾಜ್ಯೋತ್ಸವ ಹಬ್ಬದ ಶುಭಾಶಯಗಳು

ಸಂಪುಟ : ೫೫ ಜನವರಿ ೨೦೧೯ ಸಂಚಿಕೆ : ೦೧



ಲಿಂ. ಶ್ರೀ ಅಟವೀ ಸ್ವಾಮಿಗಳು







ಲಿಂ. ಶ್ರೀ ಉದ್ದಾನ ಶಿವಯೋಗಿಗಳು

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಭಾಲ್ಕಿ ಹಿರೇಮಠ ಸಂಸ್ಥಾನ ಮಠಾಧ್ಯಕ್ಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರು ಅವರಿಗೆ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಡಾ. ಪ್ರದೀಪ್‌ಕುಮಾರ್ ಹೆಬ್ರಿ ಅವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರದಾನ



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ



ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೫೫ ಜನವರಿ ೨೦೧೯ ಸಂಚಿಕೆ : ೦೧


## ಒಳಪುಟಗಳಲ್ಲಿ ..................




ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೨೨೨.

ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00

# ಸಂಪಾದಕೀಯ........

'ಸಿದ್ಧಗಂಗಾ' ಮಾಸಪತ್ರಿಕೆ ಯಶಸ್ವಿಯಾಗಿ ಮುನ್ನಡೆದಿದೆ. ೫೪ ಸಂಪುಟಗಳನ್ನು ಅರ್ಪಿಸಿ ೫೫ ಸಂಪುಟಗಳತ್ತ ಮುನ್ನಡೆದಿದೆ. ಎಲ್ಲ ಪೂಜ್ಯ ಶ್ರೀ ಶ್ರೀಗಳವರ ಕೃಪೆ. ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ, ಚಂದಾದಾರರ, ಆಜೀವ ಸದಸ್ಯ, ಪೋಷಕರ, ಜಾಹಿರಾತುದಾರರ ಸಹಕಾರದ ಕಾರಣದಿಂದ ಎಲ್ಲರಿಗೂ ಕೃತಜ್ಞತಾ ಪೂರ್ವಕವಾಗಿ ಪತ್ರಿಕೆ ವಂದನೆಗಳನ್ನು ಅರ್ಪಿಸುತ್ತದೆ. ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು, ಪತ್ರಿಕಾ ನಿರ್ವಹಣ ಸಮಿತಿ ಸದಸ್ಯರಾದ ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಆರ್.ಎಸ್. ಮಲ್ಲೇಶಪ್ಪ, ಶ್ರೀ ಕೆ.ಬಿ. ಶಿವಶಂಕರಯ್ಯ, ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಗೀತಾಂಜಲಿ ಗ್ರಾಫಿಕ್ಸ್, ಬೆಂಗಳೂರು ಇವರೆಲ್ಲರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಕೃತಜ್ಞತೆ ಅರ್ಪಿಸಲೇಬೇಕಾದುದೊಂದಿದೆ. ಅದೇನೆಂದರೆ ಇತ್ತೀಚೆಗೆ ನಮ್ಮ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅನಾರೋಗ್ಯದಿಂದ ಬಳಲುವಂತಾದಾಗ ವೈದ್ಯಬಂಧುಗಳು, ಚೆನ್ನೈನ ರೇಲಾ ಆಸ್ಪತ್ರೆಯ ವೈದ್ಯಬಂಧುಗಳು ಅದರಲ್ಲಿಯೂ ಮುಖ್ಯವೈದ್ಯರಾದ ಶಸ್ತ್ರಚಿಕಿತ್ಸೆಯಲ್ಲಿ ನಿಪುಣ ನಿಷ್ಣಾತರೆಂದೇ ಕೀರ್ತಿಗಳಿಸಿದ ಡಾ. ಮಹಮ್ಮದ್ ರೇಲಾ ಅವರಿಗೆ, ಸ್ವಾಮೀಜಿಯವರ ಆಪ್ತ ಸಹಾಯಕ ಬಂಧುಗಳಿಗೆ, ಚಿಕಿತ್ಸಾ ಸೇವೆಯನ್ನು ಬಿತ್ತರಿಸುತ್ತಾ ಬಂದ ಟಿವಿ ಮಾಧ್ಯಮದವರಿಗೆ ಪರಮಪೂಜ್ಯರನ್ನು ನೋಡಲು ಮೈಸೂರಿನಿಂದ ಚೆನ್ನೈಗೆ ತೆರಳಿದ ಪರಮಪೂಜ್ಯ ಸುತ್ತೂರು ಶ್ರೀ ಶ್ರೀ ಶಿವರಾತ್ರೀಶ್ವರ ದೇಶೀಕೇಂದ್ರ ಪೂಜ್ಯಸ್ವಾಮಿಗಳವರಿಗೆ, ರಾಜ್ಯದ ಮುಖ್ಯಮಂತ್ರಿಗಳಾದ ಶ್ರೀ ಹೆಚ್.ಡಿ. ಕುಮಾರಸ್ವಾಮಿ ಅವರಿಗೆ, ಜಲಸಂಪನ್ಮೂಲ ಸಚಿವರಾದ ಶ್ರೀ ಡಿ.ಕೆ. ಶಿವಕುಮಾರ್‌ರವರಿಗೆ ಕೃತಜ್ಞತಾ ಪೂರ್ವಕ ವಂದನೆಗಳನ್ನು 'ಸಿದ್ಧಗಂಗಾ' ಅರ್ಪಿಸುತ್ತದೆ. ವಿವಿಧ ಮಠಾಧಿಪತಿಗಳು, ಗೃಹಸಚಿವ ಶ್ರೀ ಎಂ.ಬಿ. ಪಾಟೀಲರು, ಶ್ರೀ ಬಿ.ಎಸ್. ಯಡಿಯೂರಪ್ಪನವರು ಪರಮಪೂಜ್ಯರನ್ನು ಕಂಡು ಭಕ್ತಾದಿಗಳಿಗೆ ಸಮಾಧಾನ ಹೇಳಿರುವುದನ್ನು ನೆನೆಯುತ್ತದೆ.

ಶ್ರೀಮಠಕ್ಕೆ ಪರಮಪೂಜ್ಯ ಶ್ರೀ ಶ್ರೀಗಳು ಆಗಮಿಸಿದ ನಂತರ ಭಕ್ತಾದಿಗಳನ್ನು ಪೂಜ್ಯರ ದರ್ಶನಕ್ಕೆ ಬಿಡದೆ ಸಹಕರಿಸಿದ ಪೋಲೀಸ್ ಇಲಾಖಾ ಅಧಿಕಾರಿಗಳು ಹಾಗೂ ಪೋಲೀಸರಿಗೆ ವಂದನೆಗಳನ್ನು ಸಲ್ಲಿಸುತ್ತದೆ. ಪರಮಪೂಜ್ಯ ಶ್ರೀ ಶ್ರೀಗಳವರ ಆಪ್ತವೈದ್ಯರಾದ ಡಾ. ಪರಮೇಶ್ವರ ಅವರನ್ನು ವಿಶೇಷವಾಗಿ ನೆನೆಯುತ್ತಾ ಕೃತಜ್ಞತೆಯನ್ನು ಸಲ್ಲಿಸುತ್ತದೆ.

* * *

ಪ್ರಜಾಪ್ರಗತಿ ದಿನಪತ್ರಿಕೆ ಸಂಪಾದಕರಾದ ಸನ್ಮಾನ್ಯ ಶ್ರೀ ನಾಗಣ್ಣನವರಿಗೆ, ಕುವೆಂಪು ವಿದ್ಯಾವರ್ಧಕ ಸಂಘ, ಮೈಸೂರು ಪ್ರಶಸ್ತಿ ನೀಡಿ ಗೌರವಿಸಿದ್ದಕ್ಕಾಗಿ ಅಭಿನಂದನೆಗಳನ್ನು ಸಲ್ಲಿಸಲು ಸಿದ್ಧಗಂಗಾ ಸಂತೋಷಿಸುತ್ತದೆ.

* * *

ದಿನಾಂಕ ೨೩-೧೨-೨೦೧೮ರ ಭಾನುವಾರದಂದು ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೪ನೆಯ ಮಹಾಧಿವೇಶನದಲ್ಲಿ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಒಂದು ಲಕ್ಷ ಗೌರವಧನದೊಂದಿಗೆ ಬೀದರ್ ಜಿಲ್ಲೆ ಭಾಲ್ಕಿ ಪೂಜ್ಯ ಶ್ರೀಗಳವರಾದ ಶ್ರೀ ಬಸವಲಿಂಗಪಟ್ಟದ್ದೇವರಿಗೆ, 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯನ್ನು ಮಂಡ್ಯದ ಡಾ. ಪ್ರದೀಪ್‌ಕುಮಾರ್ ಹೆಬ್ರಿ, ತುಮಕೂರಿನ ಕದಳಿ ವೇದಿಕೆಯ ಅಧ್ಯಕ್ಷರಾದ ಸೋದರಿ ಶ್ರೀಮತಿ ಲೋಕೇಶ್ವರಿ ಪ್ರಭು ಅವರಿಗೆ ಅರ್ಪಿಸಲಾಯಿತು, ಈ ಸಿದ್ಧಗಂಗಾ ಶಿವಕುಮಾರಶ್ರೀ ಪ್ರಶಸ್ತಿಯ ಪ್ರಾಯೋಜಕರಾದ ಶ್ರೀಮತಿ ಶಕುಂತಲಾ ಜಯದೇವ್ ಅವರನ್ನು ಗೌರವಿಸಲಾಯಿತು. ಸಂಘಸಿರಿ ಪ್ರಶಸ್ತಿಯನ್ನು ಶ್ರೀ ಬಿ.ಎಲ್. ಸಿದ್ಧಯ್ಯ, ಶ್ರೀ ಹೆಚ್.ವಿ. ರಾಜಣ್ಣ, ಶ್ರೀ ಯಂಕಯ್ಯ ಶೆಟ್ಟಿ, ಶ್ರೀ ಚನ್ನಬಸಯ್ಯ ಗುರುವಿನ, ಶ್ರೀ ಈಶ್ವರ್ ಸಿಂಗ್ ಅವರಿಗೆ ಕೊಡಲಾಯಿತು. ಇದೇ ಸಂದರ್ಭದಲ್ಲಿ ಹಿರಿಯ ಸಾಹಿತಿಗಳೂ, ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಬರೆದ 'ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು' ಕೃತಿಯನ್ನು ಲೋಕಾರ್ಪಣೆ ಮಾಡಲಾಯಿತು. ೨೦೧೯ಕ್ಕೆ ಎಲ್ಲರಿಗೂ ಶುಭವನ್ನು ಕೋರುತ್ತದೆ 'ಸಿದ್ಧಗಂಗಾ'.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ಶ್ರೀವಾಣಿ

"ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಯ್ಯಾ, ಜ್ಯೋತಿಯ ಬಲದಿಂದ ತಮಂಧದ ಕೇಡು ನೋಡಯ್ಯಾ, ಸತ್ಯದ ಬಲದಿಂದ ಅಸತ್ಯದ ಕೇಡು ನೋಡಯ್ಯಾ, ಪರುಷದ ಬಲದಿಂದ ಅವಲೋಹದ ಕೇಡು ನೋಡಯ್ಯಾ, ಕೂಡಲಸಂಗನ ಶರಣರ ಅನುಭಾವದಿಂದ ಎನ್ನ ಮನದ ಕೇಡು ನೋಡಯ್ಯಾ" ಎಂದಿದ್ದಾರೆ ಶರಣ ಮಂಗಳಮೂರ್ತಿ ಬಸವಣ್ಣನವರು.

ಜ್ಞಾನದಾಸೋಹ ಮಣಿಹದಲ್ಲಿ ನಿರತರಾಗಿ ಸುಸಂಸ್ಕೃತರೆಲ್ಲ ಜೀವನ ಯೋಗವನ್ನು ಗೌರವಿಸಿದವರೆಂದೇ ಭಾವಿಸಲಾಗುತ್ತದೆ. ಇಹದ ಬದುಕು ಸುಂದರವಾಗುವುದೇ ಜ್ಞಾನದ ಬೆಳಕಿನಿಂದ, ಅಂತಹ ಬೆಳಕನ್ನು ನೀಡುತ್ತ ಬರುವ ಕೈಂಕರ್ಯ ಸ್ವಾಗತಾರ್ಹವಾದುದು.

ಜ್ಞಾನ ನೀಡುವ ಶಿಕ್ಷಣವೆಂದರೆ ಭವ್ಯ ಭವನಗಳಲ್ಲ. ಪಾಠೋಪಕರಣ, ಪೀಠೋಪಕರಣಗಳಲ್ಲ. ಚಲನಶೀಲರಾದ, ಜ್ಞಾನಭಂಡಾರವೆನಿಸಿದ ಶಿಕ್ಷಕ ಬಂಧುಗಳು **'ಆಚಾರ್ಯ ದೇವೋಭವ'** ಎಂದು ಗೌರವಿಸಲ್ಪಡುವವರು. ಜ್ಯೋತಿ ಮುಟ್ಟಿದ ಬತ್ತಿ ಜ್ಯೋತಿಯಾಗುವಂತೆ ವಿದ್ಯಾರ್ಥಿಗಳು ಸಮಾಜದಲ್ಲಿ ಕಲಿತ ಶಿಕ್ಷಣ ಸಂಸ್ಥೆಯ ಹಿರಿಮೆಯನ್ನು ಚಿರಂತನವಾಗುವಂತೆ ಹೆಜ್ಜೆ ಹಾಕಿದವರು. ಶಾಲೆಯ ಕೀರ್ತಿಯನ್ನು ಎತ್ತಿ ಹಿಡಿದವರು. ಅಕ್ಷರ ಸಂಸ್ಕೃತಿಯಿಂದ ಮಾನವೀಯ ಮಹತ್ವವನ್ನು ಪರಿಚಯಿಸುವ ನಮ್ರಶೀಲರು. ಸಾಕ್ಷರತೆ ರಾಕ್ಷಸತ್ವಕ್ಕೆ ಒಳಗಾಗ ಬಾರದು. ಪ್ರಚಲಿತ ಜ್ಞಾನ ವಿಜ್ಞಾನ, ತಂತ್ರಜ್ಞಾನ, ವೈದ್ಯಕೀಯ ಜ್ಞಾನಗಳೆಲ್ಲ ಆತ್ಮಜ್ಞಾನಕ್ಕೆ ಸೋಪಾನಗಳಾಗಬೇಕು. ಲೋಕ ಕಲ್ಯಾಣಮುಖಿಗಳಾಗಬೇಕು. ಲೋಕಕಲ್ಯಾಣ ಆತ್ಮಕಲ್ಯಾಣದ ಗಂಧ ಪರಿಮಳವಾಗಿ ಪಸರಿಸಬೇಕು. ತಾನೂ ಉದ್ದಾರನಾಗುವಂತೆ ಸಮಾಜ ಹಾಗೂ ರಾಷ್ಟ್ರವೂ ಉದ್ಧಾರವಾಗುವಂತೆ ಇರಬೇಕು.

* * *

ಕಾವಿ ಕಾರುಣ್ಯದ ಕಾರಂಜಿಯಾಗಬೇಕು. ಮಗುವಿನ ಮುಗ್ಧಮನ; ಪ್ರಬುದ್ಧ ವಿಚಾರ ಶುದ್ಧವಿರಬೇಕು. ಕಾವಿವಸ್ತ್ರ, ಹಣ, ಅನುಕೂಲ, ಆಶ್ರಯಾದಿಗಳು ಆಮಿಷಗಳನ್ನೊಡ್ಡಿ ಸಮಾಜವನ್ನು ತಪ್ಪು ದಾರಿಗೆಳೆಯುವಂಥ ಜೀವನಕ್ಕಾಗಿಯಲ್ಲ; ಅಂತರಂಗದಲ್ಲಿ ಅಲೆ ಅಲೆಯಾಗಿ ಏಳುವ ಅಸಂಖ್ಯಾತ ಕಾಮನೆಗಳನ್ನು ಸುಡುವುದಕ್ಕಾಗಿ ಕಾವಿ ಮಾಧ್ಯಮವನ್ನಲಂಬಿಸಬೇಕು. ಅಂತರಂಗ ಬಹಿರಂಗಗಳೆರಡನ್ನೂ ಏಕಕಾಲಕ್ಕೆ ಪವಿತ್ರಗೊಳಿಸುವ ಪ್ರವೃತ್ತಿಗಾಗಿ ಕಾವಿಧಾರಿಯಾಗಬೇಕು. ಸ್ವಾಮಿತ್ವ ಮೊದಲು ತನ್ನ ದೌರ್ಬಲ್ಯಗಳ ಮೇಲೆ, ಆಮೇಲೆ ಲೋಕ ಜೀವನದ ವ್ಯವಹಾರದ ಮೇಲೆ. ಪ್ರಾಚೀನ ಪರಂಪರೆ ಕಾವಿ ಲಾಂಛನಕ್ಕೆ ಅತ್ಯುತ್ತಮ ಮಾರ್ಗದರ್ಶನ ಮಾಡುತ್ತಾ ಬಂದಿದೆ.

# ವಚನ-ತ್ರಿವಿಧಿ

## ಶ್ರೀ ಸಿದ್ಧಲಿಂಗೇಶ್ವರ ವಚನ



**ದೇಹದೊಡನೆ ಪ್ರಾಣ ಹುಟ್ಟಿತ್ತಯ್ಯಾ,**
**ಆ ದೇಹದೊಡನೆ ಮಿಶ್ರವಾದ ಪ್ರಾಣನು**
**ಶ್ರೀಗುರುವಿನ ಕರಕಮಲದಲ್ಲಿ ಉತ್ಪತ್ತಿಯಾಗಿ,**
**ಅಂಗದ ಮೇಲೆ ಲಿಂಗಸ್ವಾಯತವ ಮಾಡಿ,**
**ಉರುತರ ಲಿಂಗದಲ್ಲಿ ಭರತಚರಿತ ಚಾರಿತ್ರನ ಮಾಡಿದನಾಗಿ,**
**ಲಿಂಗದೇಹಿ ಲಿಂಗಪ್ರಾಣಿ ಎನಿಸಿಕೊಂಡು ಬದುಕಿದೆನಯ್ಯಾ,**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ದೇಹದೊಡನೆ ಪ್ರಾಣ ಹುಟ್ಟಿತ್ತಯ್ಯಾ: ದೇಹದೊಡನೆ ಶರೀರದೊಂದಿಗೆ, ಪ್ರಾಣಿ ಹುಟ್ಟಿತ್ತಯ್ಯಾ- ಪ್ರಾಣವು ಉತ್ಪತ್ಯವಾಯಿತ್ತಯ್ಯಾ, ದೇಹದೊಡನೆ - ಶರೀರದೊಂದಿಗೆ, ಮಿಶ್ರವಾದ- ಮಿಳಿತವಾದ, ಪ್ರಾಣನು-ಜೀವನು, ಶ್ರೀಗುರುವಿನ- ಶ್ರೀ ಗುರುನಾಥನ, ಕರಕಮಲದಲ್ಲಿ - ಹಸ್ತಕಮಲದಲ್ಲಿ, ಉತ್ಪತ್ಯವಾಗಿ-ಉದಯವಾಗಿ, ಅಂಗದ ಮೇಲೆ ಲಿಂಗ ಸ್ವಾಯತವ ಮಾಡಿ ; ಅಂಗದ ಮೇಲೆ ಆಚಾರಲಿಂಗದ ಮೇಲೆ, ಲಿಂಗ ಸ್ವಾಯತವ ಮಾಡಿ ಇಷ್ಟಲಿಂಗವನು ಕರಕಕ್ಷೆ ಉರಸಜ್ಜೆ ಮುಖಸಜ್ಜೆ ಅಮಳೈಕ್ಯ ಉತ್ತಮಾಂಗವೆಂಬ ಷಟ್‌ಸ್ಥಾನಂಗಳಲ್ಲಿ, ಸಂಬಂಧವ ಮಾಡಿ, ಉರುತರ ಲಿಂಗದಲ್ಲಿ ಉನ್ನತದಿಂದತಿಶಯವಾದ ಇಷ್ಟ ಮಹಾಲಿಂಗದಲ್ಲಿ, ಭರತ ಚರಿತ ಚಾರಿತ್ರ್ಯನ ಮಾಡಿದನಾಗಿ : ಭರತ : ತುಂಬಲ್ಪಟ್ಟ, ಚರಿತ - ನಡಾವಳಿಯನು, ಚಾರಿತ್ರನ ಮಾಡಿದನಾಗಿ ಜ್ಞಾನಕ್ರಿಯವಿಡಿದಾ ಚರಿಸಲ್ಪಟ್ಟಾತನ ಮಾಡಿದನಾಗಿ, ಲಿಂಗದೇಹಿ - ಲಿಂಗಶರೀರಿಯು, ಲಿಂಗಪ್ರಾಣಿಯೆನಿಸಿಕೊಂಡು - ಲಿಂಗವೇ ಹರಣವುಳ್ಳಾತನೆಂದು ಹೇಳಿಸಿಕೊಂಡು, ಬದುಕಿದೆನಯ್ಯಾ- ಕೃತಾರ್ಥನಾದೆನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಅಧಿಕಾರ ತರದೆಂದೆ ಐಶ್ವರ್ಯ ತರದೆಂದೆ
ಶೀಲವೊಂದೇ ತಹುದು ಬ್ರಾಹ್ಮಣ್ಯ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಧರ್ಮ ಜೀವನಕೆ ಬೆನ್ನು ತೋರಿದುದಲ್ಲ
ಮರ್ಮ ಬೇರುಂಟು ತಿಳಿವುದಕೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದುಡಿದು ಉಂಬುದೆ ಧರ್ಮ ನೀಡಿ ಉಂಬುದೇ ಧರ್ಮ
ಒಡಗೂಡಿ ಉಂಬುದೆ ಶಿವಧರ್ಮ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನುಡಿದಂತೆ ನಡೆಯೆಂದೆ ನಡೆದಂತೆ ನುಡಿಯೆಂದೆ
ನಡೆನುಡಿದು ಗುರುಪಾದ ಹಿಡಿಯೆಂದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುತ್ತು ಕಳೆದರೆ ಮತ್ತೆ ಪಡೆಯಬಹುದೆಂದೆ
ಹೊತ್ತು ಕಳೆದರೆ ಮತ್ತೆ ಪಡೆಯುವೆಯ । ನೀನೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲೋಕ ಆಡುವುದೆಂದು ಲೋಕ ಅನ್ನುವುದೆಂದು
ಏಕೆ ತಳಮಳಿದೆ ಒಳಗೊಳಗೆ । ನೀನೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಕಲ್ಪ ಸ್ಥಿರವಿರಲಿ ಮನವು ನಿಜದೊಳಗಿರಲಿ
ಲೋಕ ಕಾರುಣ್ಯ ತುಂಬಿರಲಿ । ತಾನೆಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ದಾನವನುಂಡು ನಿನ್ನ ನೆರಳಲಿ ಅರಳಿ
ಅನ್ನಕೆ ನಡೆಕೊಂಬ ಬಿನುಗುಗಳ । ಏನೆಂಬೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮರದಲ್ಲಿ ಮಡುವಲ್ಲಿ ದೈವ ಕಾಣುವ ಬಳಗ
ದೀನದಲಿತರಲೇಕೆ ಕಾಣದು । ಶ್ರೀಗುರುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಾಯಿ ನಾರಾಯಣ ಹಂದಿ ಮಂದಿಗೆ ದೈವ
ದೀನದಲಿತರು ಅವಕೆ ಕಡೆಯಹುದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**ಪ್ರೊ. ಹೆಚ್.ವಿ. ವೀರಭದ್ರಯ್ಯ**





## ಚಿಂತನ

# ಘನಕ್ಕೆ-ಘನ

- ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ವಿಶ್ವದ ಮೂಲವಸ್ತು ಪ್ರಕೃತಿ. ಅದು ಗುಣ ಕ್ರಿಯಾ ಯುಕ್ತ. ಸ್ಥೂಲ, ಸೂಕ್ಷ್ಮ ಜಗತ್ತೆಲ್ಲವೂ ಅದರ ವಿಸ್ತಾರ, ವಿಕಾಸ! ಅದು ಅವ್ಯಕ್ತ. ಅದರಿಂದಾದ ಇದು ಮಾತ್ರ ವ್ಯಕ್ತ. ಅದು ಬುದ್ಧಿ-ಭಾವಗಮ್ಯ. ಈ ಜಗತ್ತು ಬುದ್ಧಿ ಭಾವ- ಬಾಹ್ಯಕರಣ ಗಮ್ಯ. ಗಮ್ಯವಾದುದು 'ನಿರ್ದೇಶ್ಯ'! ಬೆರಳಿನಿಂದಲೋ ಶಬ್ದಗಳಿಂದಲೋ, ಗಣಿತಸೂತ್ರಗಳಿಂದಲೋ ತೋರಿಸಲು ಸಾಧ್ಯ. ಉದಾ: ಹೂವು; ಬೆರಳಿನಿಂದ ನಿರ್ದೇಶ್ಯ. ಭಾವನೆಗಳು, ಶಬ್ದಗಳಿಂದ ನಿರ್ದೇಶ್ಯ. ಅಣುವಿನಲ್ಲಡಗಿದ ಶಕ್ತಿ ಗಣಿತ ಸೂತ್ರದಿಂದ ನಿರ್ದೇಶ್ಯ.

ದೇವನು ಅಪ್ರಾಕೃತ ಸತ್ಯ. ಪ್ರಕೃತಿಯ ಗುಣ, ಕ್ರಿಯೆ ಅವನಲ್ಲಿಲ್ಲ. ಕಾಲ-ದೇಶ-ಮಿತಿಗಳು ಅವನಲ್ಲಿಲ್ಲ. ಆದ್ದರಿಂದ ಅವನು ಸಾಮಾನ್ಯವಾಗಿ ಅನಿರ್ದೇಶ್ಯನು! ನೇರವಾಗಿ ನಿರ್ದೇಶಿಸಲು ಆಗದಿದ್ದರೂ ಸಾಂಕೇತಿಕ, ಸೂಚ್ಯ, ಧ್ವನ್ಯಾತ್ಮಕ ಶಬ್ದ ಬಳಸಿ ಅವನನ್ನು ಭಾವ-ಅನುಭಾವಕ್ಕೆ ತರಲು ಜ್ಞಾನಿಗಳು ಯತ್ನಿಸಿದ್ದಾರೆ. ಉದಾ: ದೇವನು ಅವರ್ಣನೀಯ ವರ್ಣನೆಗೆ ನಿಲುಕಲಾರ ಎನ್ನುವುದು ವರ್ಣನೆಯೇ! ಆದರೆ ಅದು ಗುಣ ಕ್ರಿಯಾ ಸಾಂಬಂಧಿಕ ವರ್ಣನೆಯಲ್ಲ! ಅದು ವರ್ಣನೆಯಲ್ಲದ ವರ್ಣನೆ! ವರ್ಣನಾ ಶಬ್ದಗಳು ಮೌನ ವಾದಲ್ಲಿಯೇ ದೇವ! ಮೌನ, ಮಹಾ ಮೌನವದು ದೇವ!

ವ್ಯಾಸ ಮಹರ್ಷಿ ಅವನನ್ನು ಬಹು ಮಾರ್ಮಿಕವಾಗಿ ಯುಕ್ತಿಯಿಂದ 'ಶಾಸ್ತ್ರಯೋನಿ' ಎಂದು ಸೂತ್ರಿಸಿದ. ಶಬ್ದ ರೂಪ ಶಾಸ್ತ್ರಗಳು ಎಲ್ಲಿಂದ ಹೊಮ್ಮಿದವೋ ಅದು ದೇವ. 'ನಿಶ್ಶಬ್ದಂ ಬ್ರಹ್ಮ'! ಶಾಸ್ತ್ರಗಳಿಂದಾದ ಜ್ಞಾನವು ಎಲ್ಲಿ ಮರೆ ಮೌನವಾಗುವುದೋ ಅದು!

ಓದಿದರೆ ಕೇಳಿದರೆ ಅರ್ಥವಾಗುತ್ತದೆ ಅದು ಶಾಬ್ದ ಬೋಧ. ಆ ಶಬ್ದಗಳು ನಿರ್ದೇಶಿಸುವತ್ತ ಮನಸ್ಸು ಹರಿದು ಅಮನವಾಗಬೇಕು. ಆಗ ತತ್ತ್ವಬೋಧ. ಅದು ಆಗದೆ ಬರೀ ಶಾಬ್ದಬೋಧ ಹೊಂದಿ 'ತಿಳಿದೆವು' ಎಂದು ಭಾವಿಸಿದರದು ಭ್ರಮೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಈ ಭ್ರಮೆ ಅಡಗಬೇಕು. ಶಬ್ದ ಮರೆಯಾಗಬೇಕು. ಆ ಶಬ್ದಗಳ ಒಳ ಹಾಗೂ ಸೂಕ್ಷ್ಮ ನಿರ್ದೇಶನದ ಪಥವಿಡಿದು ಮನಸ್ಸು ಸುಳಿಯಬೇಕು, ಅಡಗಬೇಕು! ಆಗ ಅನಿರ್ದೇಶ ವಪುವಿನ ಜ್ಞಾನ. ಅಲ್ಲಿ ಮೌನ ಅನುಭವ.

ನಾನು ಜಗತ್ತನ್ನು ನೋಡುತ್ತೇನೆ, ತೋರಿಸುತ್ತೇನೆ ಎನ್ನುವುದಕ್ಕೆ ಅರ್ಥವಿದೆ. ಆದರೆ 'ನಾನು ದೇವನನ್ನು ತೋರಿಸುತ್ತೇನೆ; ನಾನು ದೇವರನ್ನು ನೋಡುತ್ತೇನೆ' ಎನ್ನುವ ಮಾತಿಗೆ ಅರ್ಥವಿಲ್ಲ. ನೋಡುವ ಹಾಗೂ ತೋರಿಸುವ ಕಾರ್ಯಗಳಿಗೆ ಅನೇಕ ಕರಣಗಳು, ಸಲಕರಣೆಗಳು ಬೇಕು. ಭಗವತ್‌ಕ್ಷೇತ್ರ ಪ್ರವೇಶಿಸಿದೊಡನೆಯೇ ಶಬ್ದಗಳೂ ಕರಣಗಳೂ ಅಡಗುವುವು! ಅಂದರೆ ಬಾಹ್ಯಾಂತರ ಸ್ಪಂದನ ನಿರುದ್ಧವಾಗುವುದು! ಮನಸ್ಸು ಅಮನವಾಗುವುದು! ಭೌತ ಹಾಗೂ ಭಾವನಾತ್ಮಕ ಭೇದ ಮರೆಯಾಗುವುದು! ಪೂರ್ವ ಪಶ್ಚಿಮವೆಂಬ ಭೇದ ಅಡಗಿದಾಗ ನಿಜವಾದ 'ಆಕಾಶ' ಭಾನ. ಹಾಗೆ ಒಳ-ಹೊರ, ಸ್ಥೂಲ-ಸೂಕ್ಷ್ಮ, ಕಾರ್ಯ-ಕಾರಣ ಮುಂತಾದ ಭೇದ ಕರಗಿಹೋದಾಗ ದೇವ-ಭಾನ! ನಿರಪೇಕ್ಷ ಸತ್ಯದರಿವು.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಎಂತಲೇ ದೇವಜ್ಞಾನವನೀವ ಗುರು ಕೂಡ ಕೊನೆಯಲ್ಲಿ 'ಮೌನ!' 'ಗುರೋಽಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಃ ತು ಛಿನ್ನ ಸಂಶಯಾಃ' ಮೌನವೇ ಅಂತಿಮ ವ್ಯಾಖ್ಯಾನ! ಅದರಿಂದಲೇ ಶಿಷ್ಯರ ಸಂಶಯಗಳೆಲ್ಲ ಶಾಂತ!

ನಿರ್ದೇಶ್ಯವಾದುದೆಲ್ಲ 'ಇದು! ನಿರ್ದೇಶ್ಯವಲ್ಲದ ಆ ದೇವನು 'ಅದು! ತತ್!

**ಘನ ಗಂಭೀರ ಮಹಾಘನದೊಳಗಿನ ಘನಕ್ಕೆ**
**ಘನವಾಗಿದ್ದೆನಯ್ಯಾ!**
**ಕೂಡಲಸಂಗಮದೇವಯ್ಯನೆಂಬ**
**ಮಹಾಬೆಳಗಿನ ಬೆಳಗಿನೊಳಗಿದ್ದೇನೆಂಬ**
**ಶಬ್ದ ಮುಗ್ಧವಾದುದೇನೆಂಬೆನಯ್ಯಾ?**
**ಇದು ಬಸವ ನುಡಿ! ನುಡಿಗೆ ನಿಲುಕದ ನಿಜದ**
**ಅನುಭಾವದುಲಿ!**

ಜಗತ್ತು ಗಂಭೀರ ಘನ! ಭವ್ಯ; ವಿಶಾಲ; ಅಂತವಿಲ್ಲದಷ್ಟು ವಿಸ್ತಾರ! ಅದರ ಮೂಲ ಕಾರಣವು ದೇವಾತ್ಮ ಶಕ್ತಿ; ಅದು ಆ ಘನಕ್ಕೆ ಘನ! ಅದರ ಪರಮಾಧಾರ ಚೈತನ್ಯವೇ 'ದೇವ'. ಅವನು ಆ ಗಂಭೀರ ಘನಕ್ಕೆ ಘನವಾದ ಪರಮ ಶಕ್ತಿಗೂ ಮೀರಿದ 'ಘನ!' ಅದನ್ನು 'ನಿಶ್ಶಬ್ದ'-ಸತ್ಯ ಎಂದರು ಶರಣರು. ಈ 'ನಿಶ್ಶಬ್ದಂ ಬ್ರಹ್ಮ' 'ಘನದ ಘನದ ಘನ; 'ಅನಿರ್ದೇಶ್ಯವಪು' ಎಂಬ ಶಬ್ದ ಬಳಸಿ ಅದನ್ನು ಧ್ಯಾನಿಸು ವುದೇ 'ಭವಚ್ಚಿಂತನ!.

ಇಷ್ಟಲಿಂಗವು ದೃಷ್ಟಿಗೋಚರ. ಪ್ರಾಣಲಿಂಗವು ಮನೋಗೋಚರ. ಭಾವಲಿಂಗವು ಜ್ಞಾನಗೋಚರ. ಮಹಾಲಿಂಗವು ಭಾವಗೋಚರ. ಮನವು ಇಷ್ಟಲಿಂಗವಿಡಿದು ಆ ಮಹಾಲಿಂಗಕ್ಕೇರಿ ಅದರಾಚೆ ಸರಿದರೆ 'ನಿರ್ವಾಣ' ಹೊಂದುತ್ತದೆ. ಆಗ ಅನುಭವಿಸಿದುದು 'ಭಗವಂತ'!.

ಯಾವುದೇ ದೃಶ್ಯವಸ್ತು, ದೇವ ಸಂಕೇತ ಅಥವಾ ಮೂರ್ತಿ ತೆಗೆದುಕೊಳ್ಳಿ ಸಾಧನೆಗೆ. ಅದರಲ್ಲಿರುವ ನಿರ್ದೇಶ್ಯಾಂಶ ಬದಿಗೆ ಇರಿಸಿ ಅನುಭವಿಸಿದರೆ ಅದುವೇ ನಿಜ ದೇವರು. ಹಾಗೆ ನೋಡ ಕಲಿತರೆ ಎಲ್ಲವೂ ದೇವರು; ಭೇದದೃಷ್ಟಿ ಇರಿಸಿ ಹುಡುಕಿದರೆ ಯಾವುದೂ ದೇವರಲ್ಲ!

ನಿಜದೇವರಿಗೆ ಯಾವುದಾದರೂ ರೂಪ ಕೊಡಿ, ನಾಮವಿಡಿ. ಬಸವಣ್ಣ 'ಕೂಡಲಸಂಗಮ' ಎಂದು ಹೆಸರಿಸಿದ. ಅಲ್ಲಮ 'ಗುಹೇಶ್ವರ'ನೆಂದ. ನಿಜಗುಣ ಶಿವಯೋಗಿಗಳು 'ಶಂಭುಲಿಂಗ' ಎಂದು ಕರೆದರು. ಕೇವಲ ಶಬ್ದಭೇದ! ರೂಪಭೇದ! ಇದನ್ನು ಅರಿತರೆ ಎಲ್ಲ ಶಾಂತಿ! ಅರಿಯದಿರೆ ಧರ್ಮ-ಧರ್ಮಗಳಲ್ಲಿ ಹೋರಾಟ! ವ್ಯಕ್ತಿ-ವ್ಯಕ್ತಿ, ಸಾಧನೆ- ಸಾಧನೆಗಳಲ್ಲಿ ಘರ್ಷಣೆ!

ಅರಿತವರೆಲ್ಲ ಒಂದೇ! ಸಾಗರದತ್ತ ಹರಿದ ನದಿಗಳೆಲ್ಲ ಒಂದೇ! ಮಡುಗಟ್ಟಿದರೆ ಮಾತ್ರ ಎಲ್ಲ ಬೇರೆ! ಅರಿತ ಸಂತರಿಗೆ ಅದ್ವಯಾನಂದ ಅರಿಯದವರಿಗೆ ಧರ್ಮ, ದೇವ, ಸಾಧನೆ ಎಲ್ಲ ವಿಷಯದಲ್ಲೂ ಅಸಮಾಧಾನ!

ಇಂಥ ಭಗವಚ್ಚಿಂತನದಿಂದ ಬದುಕು ದಿವ್ಯ ವಾಗುತ್ತದೆ. ಬದುಕಿನಲ್ಲಿ ಬಹು ದೊಡ್ಡ ಬದಲಾವಣೆ ಯಾಗುತ್ತದೆ. ಅದರರ್ಥ ದೇಹ ಬದಲಾಗುತ್ತದೆಂದಲ್ಲ. ವಿಶ್ವದತ್ತ, ಬಾಳಿನತ್ತ ನೋಡುವ ದೃಷ್ಟಿ ಬದಲಾಗುತ್ತದೆ, ಅಷ್ಟೇ. ಇಲ್ಲಿ ನೀವು ಕುಳಿತಿರುವ ಕ್ಷಣ ಲಾಟರಿ ಸಿಕ್ಕು ನೀವು ಕೋಟ್ಯಾಧೀಶನಾದರೆ ದೇಹ ಬದಲಾಗಿಲ್ಲ, ಭಾವ ಬದಲಿಸಿದೆ.

ಹಾಗೆ ಸಂತರು, ದಾರ್ಶನಿಕರು. ಅವರ ಬದುಕು ಯಥಾಪೂರ್ವ. ಭಾವ ಮಾತ್ರ ಪೂರ್ಣ! ಬೇರೆ ಅವರು ನೂರಾರು ಕಾರ್ಯ ಮಾಡುತ್ತಾರೆ. ಮಾಡುವ ಮಾಟದಲ್ಲಿ ಅವರಿರುವುದಿಲ್ಲ.

ಇದೊಂದು ಭಾರತೀಯ ಆಧ್ಯಾತ್ಮಿಕ ಕ್ಷೇತ್ರದಲ್ಲಿ ಅದ್ಭುತ ಅನುಭವ! ಪಾಲ್ ಬ್ರಂಟನ್ ಭಾರತ ದೇಶಕ್ಕೆ ಬಂದ. ಬಹಳ ದೊಡ್ಡ ಮನುಷ್ಯ. ಸಂತರನ್ನು ಕಾಣಬೇಕು ಎಂದು ಹುಡುಕಾಡುತ್ತ ಹುಡುಕಾಡುತ್ತ ರಮಣ ಮಹರ್ಷಿಗಳ ಹತ್ತಿರ ಬಂದ. ರಮಣ ಮಹರ್ಷಿಗಳನ್ನು ಕಂಡು ಅಲ್ಲಿ ಅನುಭೂತಿಯನ್ನು ಪಡೆದ. ತಿರುಗಿ ತನ್ನ ದೇಶಕ್ಕೆ ಹೋಗುವಾಗ ಹೇಳಿದ ಗೆಳೆಯನಿಗೆ-'ನಾನು ಬರುವಾಗ ಏನೋ ಕುತೂಹಲ! ಹೊಯ್ದಾಟ! ಇಂದು ಅದು ಇಲ್ಲ. ಬರುವಾಗ ನಾನು ಪಾಲ್ ಬ್ರಂಟನ್; ಈಗ ಪಾಲನಿಲ್ಲ; ನಾನು ಮಾತ್ರ ಇದ್ದೇನೆ. 'ಇದು ಆಧ್ಯಾತ್ಮಿಕ ಪವಾಡ!'.

(ಕೃಪೆ: ಭಗವಚ್ಚಿಂತನ)



ನುಡಿನಮನ

# ಸಿದ್ಧಗಂಗೆಯ ಸಿದ್ಧಿಪುರುಷ

– ಪ್ರೊ. ಎಸ್. ಶಿವರಾಜಪ್ಪ *

ಶ್ರೀ ಸಿದ್ಧಗಂಗಾ ಕ್ಷೇತ್ರ ಸರ್ವರಿಗೂ ಸಿದ್ಧಿ ನೀಡುವ ಒಂದು ಅವಿಮುಕ್ತ ಕ್ಷೇತ್ರ. ಇಲ್ಲಿನ ಐತಿಹ್ಯ ಪರಂಪರೆ, ಸಾಧಿಸಿರುವ ಲೋಕೋಪಕಾರಕ ಮಹಾಕಾರ್ಯ ಭಾರತದ ಇತಿಹಾಸದ ಪುಟದಲ್ಲಿ ಬರೆದಿಡುವ ದಾಖಲಾತಿಗಳು. ಶ್ರೀಕ್ಷೇತ್ರ ಶತಮಾನದುದ್ದಕ್ಕೂ ಸಾಧಿಸಿರುವ ಆಧ್ಯಾತ್ಮಿಕ ಜನಮನ ಸೆಳೆದಿರುವುದು ಶ್ರೀಕ್ಷೇತ್ರದ ಹಿರಿಮೆ ಗರಿಮೆಯನ್ನು ಸೂಚಿಸುತ್ತದೆ.

೧೯ನೆಯ ಶತಮಾನದ ಶ್ರೀಮದ್ ಅಟವೀಶ್ವರರು ಮತ್ತು ಶ್ರೀಮದ್ ಉದ್ದಾನ ಶಿವಯೋಗಿಗಳು ಶ್ರೀಕ್ಷೇತ್ರದ ಪ್ರೇರಕ ಶಕ್ತಿಗಳು. ಇವರೀರ್ವರ ಆಶೀರ್ವಾದವನ್ನೊತ್ತು ೧೯೩೦ ರಲ್ಲಿ ಕ್ಷೇತ್ರಾಧಿಪತಿಗಳಾಗಿ ಬಂದ ಪೂಜ್ಯಶ್ರೀ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹತ್ತು ಹಲವು ರಚನಾತ್ಮಕ ಕಾರ್ಯಗಳೊಂದಿಗೆ ದಿವ್ಯ ಭವ್ಯ ಕ್ಷೇತ್ರವನ್ನಾಗಿ ಮಾಡಿದ ಜಗತ್ತು ಕಂಡ ಜಂಗಮರು ಇವರು. ಇಲ್ಲಿ ಓದಿ ಬಾಳು ಬೆಳಗಿಸಿಕೊಂಡವರು ಕೋಟ್ಯಾನು ಕೋಟಿ ಬಡಮಕ್ಕಳು. ಶ್ರೀಗಳವರ ನಡೆ-ನುಡಿ, ತಪಸ್ಸು, ಪವಿತ್ರ ಸಂಕಲ್ಪ, ಕ್ರಿಯಾಶಕ್ತಿಯ ಪ್ರಾಬಲ್ಯಗಳು, ಕೈಯಿಟ್ಟ ಕ್ರಿಯೆಗೆ ಅಪ್ರತಿಮ ಶಕ್ತಿ ಎನಿಸುತ್ತದೆ. ಜಾತಿ, ಮತ, ಬಡವ-ಬಲ್ಲಿದ, ಸ್ತ್ರೀ ಪುರುಷರೆಂಬ ಭೇದವಿಲ್ಲದೆ ಒಗ್ಗೂಡಿಸುವ, ಒಟ್ಟಿಗೆ ಸನ್ಮಾರ್ಗದತ್ತ ಕರೆದೊಯ್ಯುವಂತಹ ಸರ್ವಾದರಣೀಯರಾಗಿದ್ದಾರೆ.

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಪವಿತ್ರ ಕಾಯಕ ಮತ್ತು ಸೇವಾ ಮನೋಭಾವನೆಯಿಂದ ೧೧೨ ವರ್ಷಕ್ಕೆ ಪಾದರ್ಪಣೆ ಮಾಡುತ್ತಿರುವುದು ಈ ನಾಡಿನ ಸುಕೃತವೇ ಸರಿ. ಈ ದೀರ್ಘಾವಧಿಯ ಅವರ ತಪಶಕ್ತಿ, ಕಾಯಕನಿಷ್ಠೆ, ದಾಸೋಹ ಪ್ರೇಮ ಜನತೆಯ ಸರ್ವಸೋಮುಖ ಕಲ್ಯಾಣಕ್ಕೆ ಪ್ರೇರಕ ಶಕ್ತಿಯಾಗಿದೆ. ಇಂಥ ಕಾಯಕ ತಪಸ್ವಿಗಳು ಜನ ಕಲ್ಯಾಣಕ್ಕೆ ಮಾಡಿದ ಸ್ಮರಣೀಯ ಕಾರ್ಯಗಳನ್ನು ಸ್ಮರಿಸಿ ನಾಡಿನುದ್ದಕ್ಕೂ ಭಕ್ತಿಭಾವವನ್ನು ಪ್ರಕಟಿಸುತ್ತಿರುವುದು ಭಕ್ತವೃಂದರ, ನೊಂದವರ, ಹಸಿದವರ, ಅತಿಥಿ ಅಭ್ಯಾಗತರ ಯೋಗಕ್ಷೇಮಕ್ಕೆ ಮೀಸಲಾಗಿದೆ. ಅವರೊಂದು ಶಿವ ಸ್ವರೂಪವೇ ಎನಿಸಿದ್ದಾರೆ. ಹತ್ತಾರು ವಿದ್ಯಾರ್ಥಿ ನಿಲಯ, ನೂರಾರು ಶಾಲಾ ಕಾಲೇಜುಗಳನ್ನು ಸ್ಥಾಪಿಸುವುದರ ಮೂಲಕ ಸರ್ವೋದ್ಧಾರ ಸಮಗ್ರ ಯೋಜನೆಗಳವರೆಗೆ ಎಲ್ಲಾ ಕಾರ್ಯಗಳಲ್ಲಿಯೂ ಕಾಯಕ ನಿಷ್ಠೆಯನ್ನು ತೋರಿಸಿ, ಗಡಿಯಾರವೂ ನಾಚಿಕೊಳ್ಳುವಂತಹ ಸಮಯ ಪ್ರಜ್ಞೆಯಿಂದ ಕರ್ತವ್ಯ ನಿರ್ವಹಿಸಿ, ಒಂದು ಅದ್ಭುತ ಶಕ್ತಿಯಾಗಿ, ಕಲ್ಪವೃಕ್ಷದಂತೆ ಬೆಳೆದು **"ನಡೆದಾಡುವ ದೇವರು"** ಎಂಬ ಕೀರ್ತಿಗೆ ಭಾಜನರಾಗಿದ್ದಾರೆ.

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಲೋಕೋತ್ತರ ಗುಣ, ವಿಶೇಷ ಲಿಂಗ ತಪಸ್ಸು, ವಾತ್ಸಲ್ಯಭಾವ, ಕ್ರಿಯಾಶಕ್ತಿಗಳು ಪವಾಡ ಸದೃಶವಾದುದು. ಈ ಲೋಕದ ಜನಗಳೆಲ್ಲ ಶ್ರೀಗಳವರ ಉದಾತ್ತ ನಡೆನುಡಿಗಳಿಗೆ ಮಾರು ಹೋಗಿ ಪರಮ ಭಕ್ತರಾಗಿದ್ದಾರೆ. ಅವರ ದರ್ಶನ ಮಾಡುವುದೆಂದರೆ ಭಕ್ತರಿಗೆ ಎಲ್ಲಿಲ್ಲದ ಭಕ್ತಿ, ಶ್ರದ್ಧೆ, ಉತ್ಸಾಹ, ಮಮತೆ, ಗೌರವ. ಶ್ರೀಗಳವರಿಗೂ ಸಹ ಭಕ್ತರನ್ನು ಕಂಡಾಗ ಆಶ್ರಯ ಬಯಸಿಬಂದ ವಿದ್ಯಾರ್ಥಿಗಳನ್ನು ಕಂಡಾಗ ಅದೇ ಮಮತೆ ಆನಂದಗಳು ಉಕ್ಕಿ ಬರುವುದನ್ನು ಕಾಣುತ್ತೇವೆ. ಬಹಳ ಹರ್ಷಚಿತ್ತರಾಗಿ ಬರಮಾಡಿಕೊಂಡು ಯೋಗಕ್ಷೇಮ, ಅಭ್ಯುದಯಗಳನ್ನು ವಿಚಾರಿಸಿ ಬಂದ ಉದ್ದೇಶಗಳಿಗೆ ಪರಿಹಾರ ಸೂಚಿಸುತ್ತಾರೆ. ಕೆಲಸವಾದ ಮೇಲೆ 'ಊಟ ಮಾಡಿ ಹೋಗಿ' ಎಂಬ ಪ್ರಸಾದಿಕ ಆಶೀರ್ವಾದ ನೀಡುತ್ತಾರೆ. ಈ ಗುರು ಶಿಷ್ಯರ ಸಮಾಗಮ ಅಗಲಿಕೆಗಳು ತವರೂರ ತಿಟ್ಟತ್ತಿ ತಿರುಗಿ ನೋಡುವ ಮಮತೆಯ ಮಗಳ ಕರುಳ ಮಿಡಿದಂತಿರುತ್ತದೆ. ಕಣ್ಣಿಗೆ ಕಾಣದ ದೇವರು ಊರು ಊರಲ್ಲೂ ನೂರಾರು. ಆದರೆ ಧರ್ಮ ಕರ್ಮಗಳ ಹಾದಿ ತೋರಿ ಆ ದೇವರ ಸನ್ನಿಧಿಗೆ ನಡೆಸಿದ ಈ ಪ್ರತ್ಯಕ್ಷ ಗುರುವೇ ನಮ್ಮ ಪಾಲಿನ ದೇವರು ಎಂದು ನಂಬಿರುವ ಕೋಟ್ಯಾನು ಕೋಟಿ ಭಕ್ತರನ್ನು ಇಂದಿಗೂ ಕಾಣಬಹುದು.

* ನಿರ್ದೇಶಕರು, ಪ್ರಾಚ್ಯ ವಿದ್ಯಾ ಸಂಶೋಧನಾಲಯ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು-೦೫

ಶತವರುಷ ದಾಟಿದ ಸುಸಂದರ್ಭದಲ್ಲಿ 'ಕರ್ನಾಟಕ ರತ್ನ' ಎಂದೆನಿಸಿಕೊಳ್ಳುವುದು ಯೋಗಾನುಯೋಗ, ೨೧ನೇ ಶತಮಾನದ 'ನಡೆದಾಡುವ ದೇವರು' ಎಂದು ಖ್ಯಾತಿ ಹೊಂದಿರುವ ಶ್ರೀ ಸಿದ್ಧಗಂಗಾ ಮಠಾಧೀಶರಾದ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಿಗೆ ಕರ್ನಾಟಕ ರಾಜ್ಯ ಸರಕಾರ 'ಕರ್ನಾಟಕ ರತ್ನ', ಬಸವ ರಾಷ್ಟ್ರೀಯ ಪ್ರಶಸ್ತಿ ಪುರಸ್ಕಾರ, ಮಹಾವೀರ ಪ್ರಶಸ್ತಿಗಳನ್ನು, ಭಾರತ ಸರ್ಕಾರ ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಇಂಥ ಅಪೂರ್ವ ಸಂಗಮ ಅವರನ್ನು ಕಾಣುವ ಯೋಗಾಯೋಗ ಅಸಂಖ್ಯ ಭಕ್ತಾದಿಗಳದು. ಏಕೆಂದರೆ ತಮ್ಮ ಸರಳ, ಸಜ್ಜನಿಕೆ, ನಿಸ್ವಾರ್ಥ ಪ್ರಾಮಾಣಿಕತೆಯೊಂದಿಗೆ ಭಕ್ತಿ, ಜ್ಞಾನ ಮತ್ತು ಕರ್ಮ ಯೋಗಗಳ ಸಾಧನೆ ಗೈಯುತ್ತಿರುವ ಶ್ರೀ ಶ್ರೇಷ್ಠ ಸಂತ ಸಿದ್ಧಗಂಗಾ ಶ್ರೀಗಳು ಈಗಾಗಲೇ ಜನಮನದಲ್ಲಿ ವಿಶ್ವರತ್ನವಾಗಿಯೇ ಬಿಟ್ಟಿದ್ದಾರೆ.

ಶ್ರೀ ಸಿದ್ಧಗಂಗಾ ಮಠದ ವಿಶೇಷವೇನು? ಅದರೊಂದಿಗೆ ಪೂರ್ಣ ಲೀನರಾಗಿ ಹೋಗಿರುವ ಶತಾಯುಷಿ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶ್ರೇಷ್ಠತೆ ಏನು? ಶ್ರೀ ಸಿದ್ಧಗಂಗಾ ಶ್ರೀಗಳ ಹೆಸರನ್ನು ಪ್ರಸ್ತಾಪಿಸುವಾಗಲೆಲ್ಲ ನಡೆದಾಡುವ ದೇವರು, ತ್ರಿವಿಧ ದಾಸೋಹಮೂರ್ತಿ, ಕರ್ಮಯೋಗಿ ಎಂದೇ ಹೇಳಲಾಗುತ್ತದೆ. ಅದೇ ಸ್ವಾಮೀಜಿಯವರ ಬದುಕಿನ ಮಂತ್ರವಾಗಿದೆ. ಏನಿದು ತ್ರಿವಿಧ ದಾಸೋಹ? ೧೯೩೦ರಲ್ಲಿ ಶ್ರೀಮಠದ ಜವಾಬ್ದಾರಿ ಹೊತ್ತ ಸ್ವಾಮೀಜಿ ಅಂದಿನಿಂದಲೂ ಅವಿಶ್ರಾಂತರಾಗಿ ಮಠಕ್ಕೆ ಸದ್ಬೆಳಕು ಕರುಣಿಸುತ್ತಾ ಕೋಟ್ಯಾನು ಕೋಟಿ ಬಡ ಮಕ್ಕಳ ಭವಿಷ್ಯವನ್ನು ಬೆಳಗುತ್ತ ಮುನ್ನಡೆದಿದ್ದಾರೆ.

ಅನ್ನ, ಆಶ್ರಯ ಹಾಗೂ ವಿದ್ಯಾದಾನ ನೀಡುವುದರ ಮೂಲಕ ನಾಡಿಗೆ ಅನುಪಮ ಸೇವೆ ಸಲ್ಲಿಸುತ್ತಿರುವ ಶ್ರೀಗಳು ತ್ರಿವಿಧ ದಾಸೋಹಿಗಳು, ಹತ್ತು ಸಾವಿರ ವಿದ್ಯಾರ್ಥಿಗಳು ಮತ್ತು ಸಹಸ್ರಾರು ಭಕ್ತರಿಗೆ ನಿತ್ಯ ದಾಸೋಹ, ಪೂರ್ವ ಪ್ರಾಥಮಿಕದಿಂದ ತಂತ್ರಜ್ಞಾನದವರೆಗೆ ಶಿಕ್ಷಣ ಸೌಲಭ್ಯ, ಇಲ್ಲಿನ ಭವ್ಯ ಪರಂಪರೆಯಿಂದ ಪ್ರಭಾವಿತರಾದ ಪೋಷಕರು ತಮ್ಮ ಮಕ್ಕಳನ್ನು ಶ್ರೀಮಠಕ್ಕೆ ಸೇರಿಸಲು ಹಾತೊರೆಯುವುದು ಅಚ್ಚರಿಯೇನಲ್ಲ. ವಿದ್ಯೆಯೊಂದಿಗೆ ವಿನಯಶೀಲರಾಗುವ ಇಲ್ಲಿನ ಸಹಸ್ರಾರು ವಿದ್ಯಾರ್ಥಿಗಳು ಉನ್ನತ ಹುದ್ದೆ ಹಾಗೂ ಸತ್ಪ್ರಜೆಗಳಾಗಿದ್ದಾರೆ. ಈ ಎಲ್ಲಾ ಕೀರ್ತಿಯ ಹಿಂದೆ ಸಿದ್ಧಗಂಗಾ ಶ್ರೀಗಳ ಪಾತ್ರ ಮಹತ್ವದ್ದು, ಒಟ್ಟಾರೆ ಮಠದ ಎಲ್ಲರ ಕಾಯಕವೇ ಇಂತಹ ಜ್ಞಾನ ಪ್ರಸಾರಕ್ಕೆ ಕಾರಣವೆಂದು ಶ್ರೀಗಳು ವಿನಯಭಾವದಿಂದ ನುಡಿದರೂ ಇಂದು ಶ್ರೀಮಠವು ವಿಶ್ವವಿಖ್ಯಾತವಾಗುವಲ್ಲಿ ಈ ಕರ್ಮಯೋಗಿಯೇ ರೂವಾರಿ ಎಂಬುದು ನಿಸ್ಸಂದೇಹ. ರಾಷ್ಟ್ರೀಯ ಮತ್ತು ಧಾರ್ಮಿಕ ಏಕತೆಯ ಸಂಕೇತವಾಗಿ ಶ್ರೀಮಠವು ಇಡೀ ದೇಶಕ್ಕೆ ಮಾದರಿಯಾಗಿರುವುದು ನಾಡಿನ ಹೆಮ್ಮೆಯ ಸಂಗತಿಯಾಗಿದೆ.

ಸಿದ್ಧಗಂಗೆ ಪ್ರಸಿದ್ಧಿ ಪಡೆದ ಸಾಮಾಜಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಕ್ಷೇತ್ರ. ಅದು ಅದ್ಭುತವಾದ ವಿದ್ಯಾದಾನ ಕೇಂದ್ರವಾಗಿಯೂ ರೂಪುಗೊಂಡಿರುವುದು ಶಿಕ್ಷಣಕ್ಕೆ ನೀಡುತ್ತಿರುವ ಮಹತ್ವವನ್ನು ಸಾರುತ್ತದೆ. ಬದಲಾಗುತ್ತಿರುವ ಸಮಾಜದಲ್ಲಿ ಯುವಜನರನ್ನು ಸಿದ್ಧಪಡಿಸಲು ಅಗತ್ಯವಾದ ವಿಜ್ಞಾನ ತಂತ್ರಜ್ಞಾನ ಶಿಕ್ಷಣಕ್ಕೆ ಆದ್ಯತೆ ನೀಡಲಾಗುತ್ತಿದೆ. ಹಾಗೆಂದು ಮೂಲಭೂತವಾದ ಕಲೆ, ಸಂಸ್ಕೃತಿ ಇತ್ಯಾದಿಗಳನ್ನು ಮರೆತಿಲ್ಲ. ತಮ್ಮ ನಿತ್ಯ





ಕಾಯಕದಲ್ಲಿ ಸರ್ವಜನರಿಗೂ ಲೇಸನ್ನು ಬಯಸುತ್ತ, ಸಾಮಾಜಿಕ ಅಸಮತೋಲನ ನಿವಾರಣೆಗಾಗಿ ಶ್ರಮಿಸುತ್ತ, ನಿತ್ಯವೂ ಜಾತಿ, ಮತ, ಪಂಥ ಎಂಬ ಭೇದವಿಲ್ಲದೆ ರಾಷ್ಟ್ರದ ವಿವಿಧೆಡೆಗಳಿಂದ ಬಂದಿರುವ ವಿದ್ಯಾರ್ಥಿಗಳಿಗೆ ಅನ್ನ, ಜ್ಞಾನ, ವಸತಿ ಒದಗಿಸುತ್ತ ಸತತವಾಗಿ ಈ ಕಾಯಕದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಶ್ರೀಗಳು ನಿಜಕ್ಕೂ ದೀನದಲಿತರ ಉಸಿರೇ ಆಗಿದ್ದಾರೆ.

ಇಲ್ಲಿ 'ಎಲ್ಲ ನನ್ನವರೆನ್ನುವ ಭಾವದ ಕರುಣೆಯೇ ಕಣ್ತೆರೆದಿದೆ' ಎಂಬ ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ ನುಡಿ ಮನನೀಯ. ಶ್ರೀ ಗೋಸಲ ಸಿದ್ಧೇಶ್ವರರು ಸ್ಥಾಪಿಸಿದ್ದ ಸಿದ್ಧಗಂಗಾ ಮಠದ ಬಗ್ಗೆ ಇದಕ್ಕಿಂತ ಸರಳವಾಗಿ ಹೇಳಲಾಗದು. ಶ್ರೀ ಗೋಸಲ ಸಿದ್ಧೇಶ್ವರರ ಉದ್ದೇಶವನ್ನು ಸಾಕಾರಗೊಳಿಸಿದ ಕೀರ್ತಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳದು. **ನೂರಹನ್ನೊಂದು ವರ್ಷಗಳಾದರೂ** ಎಂದಿನ ಉತ್ಸಾಹದಲ್ಲಿ ಮಠದ ಅಭ್ಯುದಯಕ್ಕಾಗಿ ಶ್ರಮಿಸುತ್ತಿರುವ ಇವರ ಜೀವನಾದರ್ಶ ಎಲ್ಲಾ ಕಾಲಕ್ಕೂ ಪ್ರಸ್ತುತವಾಗಿದೆ.

ಬುದ್ಧನ ಕರುಣೆ, ಶಂಕರರ ವಿಚಾರ, ರಾಮಾನುಜರ ಮಮತೆ, ಬಸವಣ್ಣನವರ ಭಕ್ತಿಭಾವ ವಿವೇಕಾನಂದರ ವಿವೇಕವಾಣಿ, ರಾಜೇಂದ್ರರ ಮುಗುಳ್ನಗೆ, ಸಿದ್ಧಗಂಗಾ ಶಿವಕುಮಾರರ ಕಾಯಕ ದಾಸೋಹ ಪ್ರೇಮಗಳನ್ನು ಮೆಚ್ಚಿ ಆನಂದಿಸುವ ಯಾವ ವ್ಯಕ್ತಿ ತಾನೆ ಅವರ ಭಕ್ತನಾಗಲಾರ? ಜಾತಿ ಭೇದವಿಲ್ಲದೆ, ಬಡವ-ಶ್ರೀಮಂತನೆನ್ನದೆ ಸಮಾಜದಲ್ಲಿ ನೈತಿಕ ಸ್ಥಿರತೆಯನ್ನು ಕಾಪಾಡುವುದರಲ್ಲಿ ಶ್ರೀ ಸಿದ್ಧಗಂಗಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಅಗ್ರಮಾನ್ಯರು.

ಈಗ ಈ ಮಹಾ ತ್ರಿವಿಧ ದಾಸೋಹಿಗೆ ೧೧೧ ವರ್ಷ. ಶ್ರೀಮಠದ ನಿರಂಜನ ಪಟ್ಟಾಧಿಕಾರವನ್ನು ವಹಿಸಿಕೊಂಡು ದಿನಾಂಕ ೩-೩-೨೦೧೯ಕ್ಕೆ ೮೮ ವರ್ಷಗಳು. ಪರಮಪೂಜ್ಯರು ಶ್ರೀಮಠದ ಪಟ್ಟಾಧಿಕಾರಿಗಳಾಗಿ ೮೮ ವರ್ಷಗಳನ್ನು ದಾಟಿ ಕೋಟಿ ಕೋಟಿ ಜನಮನಕ್ಕೆ ಒಳಗಾಗಿದ್ದಾರೆ. ಅಂದರೆ ಇದು ಪವಾಡವೇ ಸರಿ ಹಾಗೂ ಗಿನ್ನಿಸ್ ದಾಖಲೆಗೆ ಸೇರಿಸಬೇಕಾದ ವಿಷಯವೂ ಕೂಡ. ಶ್ರೀಗಳವರ ಅವಿರತ, ನಿಸ್ವಾರ್ಥ ಸೇವೆಯಿಂದಾಗಿ ಶ್ರೀಮಠದ ಕೀರ್ತಿ ವಿಶ್ವದಾದ್ಯಂತ ಹರಡಿರುವುದನ್ನು ಇಂದಿಗೂ ಕಾಣುತ್ತಿದ್ದೇವೆ.

ಮನಸ್ಸು ಮತ್ತು ವಯಸ್ಸು ಅತಿಮುಖ್ಯವಾಗಿ ಈ ಪ್ರಪಂಚವನ್ನು ನಿಯಂತ್ರಿಸುತ್ತಿರುವ ಎರಡು ಪ್ರಮುಖ ಶಕ್ತಿಗಳು. ಈ ಎರಡು ಶಕ್ತಿಗಳನ್ನು ಪೂಜ್ಯರು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಧರ್ಮ ಮೌಢ್ಯವಲ್ಲವೆಂಬುದನ್ನು ತಿಳಿ ಹೇಳಿ, ಅಲ್ಲಿ ವೈಚಾರಿಕತೆಯ ನೆಲೆಗಟ್ಟನ್ನು ಗಟ್ಟಿಗೊಳಿಸುವಂತೆ ಮಾತನಾಡುತ್ತಾರೆ. ಅವರ ಮಾತಿನಲ್ಲಿಯೇ ಹೇಳುವುದಾದರೆ:

"ಭ್ರಷ್ಟಾಚಾರ ಮತ್ತು ಸ್ವಜನಪಕ್ಷಪಾತ ತಾಂಡವವಾಡುತ್ತಿರುವ ನಮ್ಮಲ್ಲಿ ರಾಜಕಾರಣಿಗಳು ಸ್ವಾರ್ಥ ಹಾಗೂ ಜಾತಿ ರಾಜಕಾರಣವನ್ನು ಬದಿಗಿಟ್ಟು ಸೇವಾ ಮನೋಭಾವದಿಂದ ಆಡಳಿತ ನಡೆಸಬೇಕು. ಆಗ ಜನ ನಮ್ಮನ್ನು ಮೆಚ್ಚಿಕೊಳ್ಳುತ್ತಾರೆ. ವಿದೇಶದ ಗುಲಾಮಗಿರಿಯಿಂದ ತಪ್ಪಿಸಿಕೊಂಡ ನಮಗೆ ಇಂದು ಸಿಕ್ಕಿದ್ದು ನಮ್ಮವರೇ ಆದ ಅಧಿಕಾರಸ್ಥ ಗುಲಾಮಗಿರಿ."

"ನಮ್ಮ ಸಮಾಜ ಅಧಃಪತನದತ್ತ ಸಾಗಲು ನಾವು ಕಾರಣರಾಗಿದ್ದೇವೆ. ಹೇಗೆಂದರೆ ಭ್ರಷ್ಟಾಚಾರ, ಮೋಸ, ವಂಚನೆ ಮುಂತಾದ ಸಮಾಜಘಾತುಕ ಅಂಶಗಳ ಬಗ್ಗೆ ಪ್ರಶ್ನೆ ಮಾಡುವ ಸಾಮರ್ಥ್ಯವನ್ನು ಕಳೆದುಕೊಂಡಿದ್ದೇವೆ. ಒಳ್ಳೆಯದನ್ನು ಪ್ರೋತ್ಸಾಹಿ, ಕೆಟ್ಟದ್ದನ್ನು ದೂರವಿಡುವ ಮನೋಭಾವವನ್ನು ನಾವು ಬೆಳೆಸಿಕೊಳ್ಳಬೇಕು."

"ಜಾತೀಯತೆಯನ್ನು ನಿರ್ಮೂಲನಗೊಳಿಸಿ ನವ ಸಮಾಜವನ್ನು ಸ್ಥಾಪಿಸಿದ ಜಗಜ್ಯೋತಿ ಬಸವಣ್ಣನವರ ಆಡಳಿತ ಈಗ ಮತ್ತೆ ಪುನರಾವರ್ತನೆಯಾಗಬೇಕಾಗಿದೆ. ಈ ದಿಕ್ಕಿನಲ್ಲಿ ನಮ್ಮ ಜನಪ್ರತಿಗಳು, ಆಡಳಿತ ಚುಕ್ಕಾಣಿ ಹಿಡಿದಿರುವವರು ಪ್ರಯತ್ನಶೀಲರಾಬೇಕು."

ಪೂಜ್ಯರ ಮೇಲಿನ ಒಂದೊಂದು ಮಾತುಗಳು ಸಮತಾವಾದವನ್ನು ಬಿತ್ತರಿಸುತ್ತವೆ. ಈ ದೃಷ್ಟಿಯಿಂದ ಪರಮಪೂಜ್ಯರು ಹೊಸ ವಿಚಾರಧಾರೆಯ ಹರಿಕಾರರಾಗಿದ್ದಾರೆ. ಮಹಾತ್ಮ ಶ್ರೀ ಗುರುಮಲ್ಲೇಶ್ವರರನ್ನು ಬಿಟ್ಟರೆ ಅನಂತರ ಬರುವ ಯುಗಪುರುಷರೆಂದರೆ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು. ಬಸವಾದಿ ಶರಣರ ಹಾದಿಯಲಿ ನಡೆದ ಇವರು ಶರಣರೇ ಇವರಾಗಿದ್ದಾರೆ. ಮಹಾದಾಸೋಹಿ, ಕಾಯಕಯೋಗಿ ಎನ್ನುವ ಶಬ್ದ ಇವರಿಗೆ ಅನ್ವರ್ಥವಾಗಿದೆ. ಈ ಕಾರಣದಿಂದ ಸಿದ್ಧಗಂಗಾ ಶ್ರೀಗಳು ಜಗದ ಜಂಗಮರು, ಕರುಣಾಮಯಿಗಳು, ಎಲ್ಲಕ್ಕಿಂತ ಹೆಚ್ಚಾಗಿ ಸರ್ವಜನ ಹಿತರಕ್ಷಕರು.

ಸಂಶೋಧನೆ

# ಕರ್ಮಸುಜ್ಞಾನ ಶಿವಯೋಗಿ ಶಾಸನೋಕ್ತ ಪರಮಾರಾಧ್ಯ ಸಿದ್ಧರಾಮ

– ಡಾ. ಎಂ.ಜಿ. ನಾಗರಾಜ್ *

ಸಾಮಾಜಿಕ ಹಿತವನ್ನು ಕರ್ಮಯೋಗಿಯಾಗಿ ಸಾಧಿಸಿದ ಸಿದ್ಧರಾಮ 'ಕರ್ಮ'ವನ್ನು 'ಕಾಯಕ'ಯೋಗದ ಮಟ್ಟಕ್ಕೆ ಶಿವಯೋಗಿಯಾಗಿ ಏರಿಸಿದ. ಸಾಮಾನ್ಯಭಾವದಿಂದ ಅಸಾಮಾನ್ಯ ಶಿವಭಾವ ಶೃಂಗಕ್ಕೆ ಸಾಗಿ ಅಸ್ಮಿತೆಯನ್ನು ತೋರಿದ ಶರಣ ಸಿದ್ಧರಾಮ ಭಕ್ತಜನಕ್ಕೆ ಪರಮಾರಾಧ್ಯನಾದ[1]. ಸ್ವ-ನಿಷ್ಠೆಯಿಂದ ಕಪಿಲಸಿದ್ಧ ಮಲ್ಲಿಕಾರ್ಜುನ ನಿಷ್ಠೆಗೆ ಸಾಗಿದ ಸಿದ್ಧರಾಮ ಶರಣರ ಒಡನಾಟದಲ್ಲಿ ಶಿವಶ್ರೇಯವನ್ನು ಅನುಭವಿಸಿದ. ಅಂತೇ ನುಡಿದಿದ್ದಾನೆ. 'ಸೋಹಂ' ಎಂಬುದು ಅಂತರಂಗದ ಮದ ನೋಡಯ್ಯ । ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯಾ । ಈ ದ್ವಂದ್ವವನಳಿದು 'ದಾಸೋಹಂ' ಎಂದೆನಿಸಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ[2]. ಅಂದರೆ ದಾಸೋಹಕ್ಕೆ ತನುಮನ ದಂಡಿಸಿ, ಮದರಹಿತನಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನ್ನು ನೆನಸುತ್ತ ಮಾಡುವ ಕಾಯಕ, ಶಿವಯೋಗ ಸಿದ್ಧಿಯ ಪಥಮಾಧ್ಯಮ.

ಸಿದ್ಧರಾಮ ಸಂಬಂಧೀ ಶಾಸನಗಳ ಆರಂಭಕ್ಕೆಯೆ ಮಂಗಳದ ಮುನ್ನುಡಿಯಂತೆ ಕಪಿಲಸಿದ್ಧ ಮಲ್ಲಿಕಾರ್ಜುನನನ್ನು ಸ್ಮರಿಸುವ ವಚನಸ್ತುತಿ ಕಾಣಬರುತ್ತದೆ; ಶಾಸನಗಳ ಕೊನೆಗೆ ಸಾಂದರ್ಭಿಕವಾಗಿ ದಾನದತ್ತಿಯನ್ನು ಅಭಿನವ ಶ್ರೀಶೈಲವೆನಿಪ ಸೊಂನಲಿಗೆಯ ಕಪಿಲಸಿದ್ಧ ಮಲ್ಲಿಕಾರ್ಜುನದೇವನ ಸೇವೆಗೆ ಅರ್ಪಿಸಿದುದನ್ನು, ಕಾಪಾಡದಿದ್ದರೆ ಒದಗುವ ಅಧೋಗತಿ ಕುರಿತ ಶಾಪಾಶಯವೂ ಸೂಚಿತವಾಗಿದೆ. ಇದು ಸಿದ್ಧರಾಮನ ಬಗೆಗೆ ಅವನ ಸಾಮಾಜಿಕ ಶ್ರೇಯಾನುದೃಷ್ಟಿಗೆ ಜನಭಾವಭಕ್ತಿಯು ಸಲ್ಲಿಸಿದ ಅಧಿಕೃತ ಮಾನ್ಯ ದಾಖಲೆಯಾಗಿದೆ; ಅವನ ಕರ್ಮಯೋಗ-ಶಿವಯೋಗದ ಸಮನ್ವಯ ವಿಕಾಸ ಸಾಧನೆಗೆ ಮನಸಾರೆ ಮೆಚ್ಚಿದ ಪರಂಪರೆಯ ಮಾದರಿಯಾಗಿದೆ.

ಸಿದ್ಧರಾಮ ಮೊದಲಿಗೆ ಕರ್ಮಯೋಗಿ ಎನಿಸಲಿ, ನಂತರ ಶಿವಯೋಗಿ ಎನಿಸಲಿ, ಸೊಂನಲಿಗೆ ಅವನಿಗೆ ಅಭಿನವ ಶ್ರೀಶೈಲ; 'ಕಪಿಲಸಿದ್ಧ ಮಲ್ಲಿಕಾರ್ಜುನ'ನಂತೆ ಅವನ ಬದುಕಿನ ಸತತ ಸಹಯೋಗಿ. ಇದು ಸಿದ್ಧರಾಮನ ವಚನಾಂಕಿತವಾಗಿ ರೂಪಗೊಂಡಿದ್ದು, ಶಾಸನಾರಂಭದ ಮಂಗಳ ವಚನೋಕ್ತಿಯಲ್ಲಿ ಹಾಗೂ ಅಂತ್ಯದ ಶಾಪಾಶಯದಲ್ಲಿ ಕಂಡುಬರುವಲ್ಲಿ ಜನಮಾನಿಸಿದ ಬಗೆಯಿಂದ ವಿದಿತವಾಗುತ್ತದೆ.

ರಾಘವಾಂಕ, ಸಿದ್ಧರಾಮನ ಬದುಕಿನ ಗುರಿ ಕುರಿತು ಹೇಳುವಲ್ಲಿ 'ಸಾಕಾರ ನಿಷ್ಠೆ ಭೂತಂಗಳೊಳಗನುಕಂಪೆ ತಾನೆ ಪರಬೊಮ್ಮ' ಎಂಬ ಜೀವನದರ್ಶನದ ಕರ್ಮಯೋಗದಲ್ಲಿ ಅಸಹಜತೆ ಸಾಮಾನ್ಯ ಬದುಕಿಗೆ ತಾಗಬೇಕೆಂದಿಲ್ಲ. ಅದು ಸಮಾಜ ಹಿತದ ಸಾಮಾನ್ಯ ಬದುಕಿನ ಚಟುವಟಿಕೆಗಳಿಗೆ ಚೈತನ್ಯದ ಆಡುಂಬೊಲ. ಡಿ.ಎಲ್. ನರಸಿಂಹಾಚಾರ್ಯರು ತಮ್ಮ ಅಭಿಪ್ರಾಯವಾಗಿ; ಸಾಕಾರನಿಷ್ಠೆ ಸಿದ್ಧರಾಮನಿಗೆ ಅಗತ್ಯವಿಲ್ಲವಾದರೂ ಅದು ಲೋಕದ ಜನರಿಗೆ ಬೇಕಾಗಿದೆ. ಸಿದ್ಧರಾಮ ಆ ನಂಬಿಕೆಯನ್ನು ಪ್ರಶ್ನಿಸುವವನಲ್ಲ, ಸಾಕಾರನಿಷ್ಠೆಯಿಂದ ಬರುವ ಆತ್ಮಕಲ್ಯಾಣವು ಭೂತಾನುಕಂಪೆಯಿಂದ ಲೋಕಕಲ್ಯಾಣವೂ ಅಹಮಹಮಿಕೆಯಿಂದ ವೃದ್ಧಿಗೊಂಡಾಗ ಅವು ಸಮಸ್ತಸನ್ಮಂಗಳ ಸ್ವರೂಪಿಯಾದ ಪರಬ್ರಹ್ಮವಲ್ಲದೆ ಮತ್ತೇನು? ಸಿದ್ಧರಾಮ ಚರಿತ್ರೆ 'ಈ ತತ್ವತಳಹದಿಯ ಮೇಲೆ ನಿರ್ಮಿತ' ಎಂದಿದ್ದಾರೆ[3]. ಗೀತೆಯು '**ಕರ್ಮಣ್ಯೇವಾಧಿಕಾರಸ್ಥೆ ಮಾ ಫಲೇಷು ಕದಾಚನ**' ಎಂದು ಹೇಳುವಲ್ಲಿಯೂ "ಫಲಾಪೇಕ್ಷೆಯಿಂದ ಮಾಡುವ ಕರ್ಮದಲ್ಲಿ ಸಫಲತೆಯು ನಿಷ್ಕಾಮ ಸ್ವರೂಪದಲ್ಲ" ಎಂಬ ಧ್ವನಿಯಿದೆ. ಆದರೆ ಶರಣರು ಇದನ್ನು ಮೀರಿ ಶಿವಯೋಗ ಸಾಧಿಸುವ ಬಗೆ ತೋರಿದ್ದಾರೆ. ಕಾರಣ ಬದುಕಿನ ಕೊನೆಯವರೆವಿಗೂ ಕೇವಲ ಕರ್ಮಯೋಗದಲ್ಲಿಯೇ ತನ್ಮಯವಾದರೆ ಅಹಮಹಮಿಕೆ ಅಂಕೆ ಮೀರೀತು, ಯಾಂತ್ರಿಕ ಭಾವನೆಗಳೂ ಚಾಚಿಕೊಳ್ಳಬಹುದು ಎಂಬ ಶಂಕೆಯೂ ಇದೆ. ಅಂದರೆ ಸಮಷ್ಟಿ ತನ್ಮಯ ಕೌಶಲ್ಯದಂತೆ (ಜಗದೊಳಗಣ

* ನಂ. ೨೨೧, "ಶ್ರೀ ಜಚನಿ ಕೃಪ" ೬ನೇ ಅಡ್ಡರಸ್ತೆ, ರಾಜಾಜಿನಗರ, ಬೆಂಗಳೂರು-೫೬೦೦೧೦



ಕೂಡಲಬಾಳು), ಸಮಷ್ಟಿ ಸಮ್ಮುಖ ವಿದೂರತೆಯನ್ನು (ಜಗದೊಳಗಣ ನಿರಂಜನ ನೋಟ) ಸಾಧಿಸಬೇಕು. ಸಾಕಾರ ನಿಷ್ಠೆಯಿಂದ ಬಯಲ ನಿರಂಜನ ನಿಲುವಿಗೆ ಸಾಗಬೇಕು. ಅದು ಕರ್ಮಯೋಗದ ಸನ್ನೆಗೋಲಿನಿಂದ ಚಿಮ್ಮಿ ಶಿವಯೋಗಕ್ಕೆ ಸಲ್ಲುವಲ್ಲಿ ಷಟ್‌ಸ್ಥಲ ವಿಕಾಸ ಪರಂಪರೆಗೆ ಅನುವಾಗಿ ಶಿವನೇ ತಾನಾಗುವ ಪಾರಮಾರ್ಥಿಕ ಸಾರ್ಥಕತೆಯಾಗುತ್ತದೆ. ಇದು 'ತಾನೆ ಪರಬೊಮ್ಮ' ಎಂದು ಹೇಳಿಕೊಳ್ಳುವ ಸ್ಥಿತಿಯ ಬಗೆ ಅಲ್ಲ. ಬದಲು ಭವದ ಭೌತಿಕ ಆದಮ್ಯ ಆಕಾಂಕ್ಷೆಯನ್ನು ಅಂಕೆಗಿಟ್ಟು ಶಿವದೊಡನೆ ಅಲೌಕಿಕ ಮಂಗಳ ಸಂಗಮವಾಗುವಂಥದು. ಇದು ಸಿದ್ಧರಾಮನಿಗೆ ಅಲ್ಲಮ ನಿಮಿತ್ತವಾಗಿ ದೊರಕಿದ ಸೌಭಾಗ್ಯ ಸಾಫಲ್ಯತೆ. ಸಿದ್ಧರಾಮ ತನ್ನ ವಚನದಲ್ಲಿ[4] 'ನಾ ಮಾಡಿದ ಕೆರೆ ಎತ್ತ, ಕರಿಕಾಲ ಚೋಳ ಮಾಡಿದ ಕೆರೆ ಎತ್ತ', ಎಂದು ಹೇಳುವಲ್ಲಿಂದ ಮುಂದೆ ಬಯಲ ನಿರಂಜನ ನಿಲುವಿಗೆ ಸಂದ ಬಗ್ಗೆ ವಚನೋಕ್ತಿ ಮಾಡಿದ್ದಾನೆ[5]:

ಸಾಕಾರದ ಲಕ್ಷ್ಯವದು ನಿರಾಕಾರದಲ್ಲಿ ಲೀನವಲ್ಲದೆ।
ಸಾಕಾರದಲ್ಲಿ ಲೀನವಾಗಬಾರದು।

ಕೀಟ-ಭ್ರಮರ ನ್ಯಾಯದಂತೆ ಚರಿಸಬಲ್ಲಡವನೆ।
ನಿರ್ದೇಹ ಜೀವನ್ಮುಕ್ತನಂಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ।

– ಕರ್ಮಯೋಗದಲ್ಲಿಯೇ ನಿಂತರೆ ಜಗದ ಜಂಜಡವೇ ಆವರಿಸಿ ಶಿವಯೋಗ ಸಾಧ್ಯವಾಗದು. ಮಾಡಿದೆನೆಂಬುದು ಮನದಲ್ಲಿ ಹೊಳೆದು ಅದು ಅನುರಣನವಾಗುತ್ತ ಹೋದರೆ ನಿರಂಜನ ನಿಲುವು ದಕ್ಕದಾಗುತ್ತದೆ. ಅರ್ಪಣೆಯ ನಿರಾಕಾರ ಸೇವೆ ಸ್ವಾರ್ಥದ ಹೊಳಹಿಲ್ಲದೆ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಆದರಗೊಂಡರೆ ಮಾತ್ರ ಸ್ವಾರ್ಥಕತೆ ಎಂಬ ನಿಲುವು ಇಲ್ಲಿದೆ. ಬಸವಣ್ಣನೂ, ಸಾಕಾರ ಶಿವನನ್ನು ನಿಸ್ಸೀಮನನ್ನಾಗಿ ನೋಡಿ ಕರಸ್ಥಲದಲ್ಲಿ ಸಾಧಿಸಿದ ನಿರಾಕಾರ ಸಾಧನೆಯ ಸ್ವರೂಪವನ್ನು ಪ್ರತಿಮಾಭಾವದ ನಿರ್ದೇಶನದಲ್ಲಿ ಕಾಣಬಹುದು:

**ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ**
**ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ।**
**ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ**
**ಸಾಕ್ಷಿ: ಪಾದಾಭಿನ್ನಾಹಿ ಲೋಕಾಯಮೌಳಿ**
**ಬ್ರಹ್ಮಾಂಡ ಭಿತ್ತಿಯೇ**
**ಭುಜಪ್ರಾಂತ ದಿಗಂತಾಯ ಭೂತಾನಾಂ ಪತಯೇನಮ**
**ಅಗಮ್ಯ ಅಗೋಚರ ಅಪ್ರತಿಮ ಲಿಂಗವೇ,**
**ಕೂಡಲಸಂಗಮದೇವಯ್ಯ।**
**ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ**[6]

– ಕೂಡಲಸಂಗಮದೇವನಾದ ಲಿಂಗಯ್ಯನನ್ನು ಹೇಗೆಲ್ಲ ಸಾಕಾರವಾಗಿ ವರ್ಣಿಸಿದರೂ ಲಿಂಗಯ್ಯನ ಅಗಮ್ಯತೆ ಅಗೋಚರತೆ ಅಪ್ರತಿಮತೆಯಲ್ಲಿ ನಿರಾಕಾರವನ್ನು ಪರಿಭಾವಿಸಿಕೊಂಡು ಅಸಾಮಾನ್ಯನನ್ನು ಕರಸ್ಥಲಕ್ಕೆ ತಂದುಕೊಂಡ ಚೈತನ್ಯವನ್ನು ಬಸವಣ್ಣ ನಿರೂಪಿಸಿದ್ದಾನೆ. ಕರಸ್ಥಲದಲ್ಲಿ ಚುಳುಕಾದ ಲಿಂಗಯ್ಯನ ವಿಶ್ವರೂಪ ಆವರಿಸಿರುವ ಬಗೆಯು ನಿರಂಜನ ಲೀಲೆಯಾಗಿ ಕಾಣುತ್ತ 'ಎತ್ತ ನೋಡಿದರತ್ತತ್ತ ನೀನೇ ದೇವ। ಸಕಲ ವಿಸ್ತಾರದ ರೂಹು ನೀನೆ ದೇವ' ಎಂದು ನುಡಿದಿದ್ದಾನೆ.

ಹೀಗೆ ಸಾಕಾರನಿಷ್ಠೆಯ ಕರ್ಮಯೋಗವನ್ನು ಶಿವಯೋಗದಿಂದ ನಿರಾಕಾರ ನಿರಂಜನಕ್ಕೆ ಸಿದ್ಧರಾಮ ಸಾಗಿದ ಬಗೆ ಹೇಳುವ ವಚನವೊಂದು ಬಹುಜನಪ್ರಿಯವಾಗಿದ್ದುದು ಶಾಸನಗಳಲ್ಲಿ ಉಕ್ತವಾಗಿರುವಲ್ಲಿ ತೀವ್ರ ಗಮನ ಸೆಳೆಯುತ್ತದೆ ಹಾಗೂ ವಚನದ ಹಿನ್ನೆಲೆಯು ಸಿದ್ಧರಾಮನಿಗೆ ದಕ್ಕಿದ ಬಗೆಯೂ ಗಂಭೀರ ಅಧ್ಯಾತ್ಮಿಕ ಚಿಂತನೆಯ ನೆಲೆಯಲ್ಲೂ ಇದೆ.

## ಶಾಸನೋಲ್ಲೇಖಗಳು

ಕರ್ನಾಟಕದ ವಿಜಯಪುರ ಜಿಲ್ಲೆ, ತುಮಕೂರು ತಾಲ್ಲೂಕು, ಹಾಗೂ ಮಹಾರಾಷ್ಟ್ರದ ಹಲವಾರು ಕನ್ನಡ ಶಾಸನಗಳ ಆರಂಭಕ್ಕೆ ಕಪಿಲಸಿದ್ಧ ಮಲ್ಲಿಕಾರ್ಜುನನ ಬಗ್ಗೆ ಸ್ತುತಿವಚನ ಕಾಣಬರುತ್ತದೆ. ಆದರೆ ವಚನ ಸಂಪುಟದಲ್ಲಿ ಇರುವ ಸಿದ್ಧರಾಮನ ವಚನದ ಮೂರು ಸಾಲುಗಳು ಮಾತ್ರ ಶಾಸನಗಳಲ್ಲಿ ಕಾಣಬರುತ್ತದೆ. ವಚನಸಂಪುಟದಲ್ಲಿ ಕಾಣಬರದ ಪೂರ್ಣಪಾಠ, ಶಾಸನದಲ್ಲಿ ಏಳರಿಂದ ಹತ್ತು ಸಾಲುಗಳಷ್ಟು ಕಂಡುಬರುತ್ತವೆ. ಅಂದರೆ ವಚನದಲ್ಲಿರುವುದಕ್ಕಿಂತ ಹೆಚ್ಚಿನ ಸಾಲುಗಳು ಜನಬಳಕೆಯಲ್ಲಿದ್ದು ಐತಿಹಾಸಿಕವಾಗಿ ಶಾಸನಗಳ ಮೂಲಕ ದೃಢೀಕರಿಸಲ್ಪಟ್ಟಿವೆ ಎನ್ನಬೇಕು.

ವಚನದಲ್ಲಿರುವ ಸಾಲುಗಳು[೨]:

**ಓಂ ಜಯ ಪರಮೇಶ್ವರಂ ಪರಮಾತ್ಮಂ ।**
**ಈಶ್ವರನುರ್ವಿಪರ್ವಿ ಅಡಗಿಕೊಂಡಿಪ್ಪನು ।**
**ಓರ್ಬ್ಬಣಿಗೆಯಾಗಿ ಯೋಗಿಗಳ ಮನದ**
**ಸಂಸಾರ ತೆಪ್ಪದೊಳಗೆ . . .**
**ಬೇಗ ಬಂದೆತ್ತಯ್ಯಾ ಎತ್ತೆಯ್ಯಾ**
**ಕಪಿಲಸಿದ್ಧಮಲ್ಲಿನಾಥಯ್ಯಾ ॥**

ಶಾಸನಗಳಲ್ಲಿಯು ವಚನಪಾಠದಲ್ಲಿಯೂ ಒಂದೆರಡು ಸಾಲುಗಳಲ್ಲಿ ಪಾಠಾಂತರವಿದ್ದರೂ ೭ರಿಂದ ೧೦ ಸಾಲುಗಳ ವಚನದ ಪೂರ್ಣಪಾಠ, ಅಲ್ಲಿ ಕಂಡರಣೆಗೊಂಡಿದೆ. ವಿಜಯಪುರ ಜಿಲ್ಲೆ ಇಂಡಿ ತಾಲೂಕಿನ ಚೊರಗಿಯ ಕ್ರಿ.ಶ.೧೧೯೦ರ ಶಾಸನದಲ್ಲಿ[೩]:

೧ ಶ್ರೀ ಓಂ ಜಯ ಪರಮೇಶ್ವರ ಪರಮಾತ್ಮರ ಈಶ್ವರನು ವುರ್ಬ್ಬಿಯಡಂಗಿ
೨ ಕೊಂಡಿರ್ಪನೆ ಓರ್ಬಣ್ಣಗೆಯಾಗಿ ಯೋಗಿಗಳ ಮನ
೩ **ದ ಕೊನೆಯ ಜ್ಯೋತೀಶ್ವರನುಂ ವ್ರಿಷಭನ ರೂಪಾಗಿ ಯಜಮಾ**
೪ ನನುಂ ಆಚಾರ್ಯ್ಯನುಂ ತಾನೆಂಬಾಗಿ ಯೋಗಾದಿಸಂಪನ್ನ ಖಿಳೆಯ
೫ ಗಳೆಲ್ಲವಂ ಸಂಪಾದಿಸಿ **ಯೋಗರಮಣೀಯ** ಕ್ಷೇತ್ರಮನೆ ತಳವಿ
೬ ಟ್ಟು ಸಲಾಖೆವಿಡಿದು **ಅಭಿನವ ಶ್ರೀಶೈಳವನೆ** ಮಾಡಿ **ಕಪಿಲಸಿದ್ಧ**
೭ **ಮಲ್ಲೇಶ್ವರದೇವನೆ** ನೆಲಸಿ ನಿಂದು ಪುಣ್ಯಪಾಪಂ ಗಳಂ ಬರವೇಳ್ಳು ...

ಪ್ರಸ್ತುತ ಶಾಸನದ ಈ ಸ್ತುತಿವಚನವಲ್ಲದೆ ತರ್ದವಾಡಿನಾಡಿನ ಮಾಯಿದೇವ ದಣ್ಣಾಯಕನು ದೇವರ ಸೇವೆಗೆಂದು **ಚೋರಹಾರಿಗೆ** ಗ್ರಾಮವನ್ನು ದಾನ ನೀಡಿದ ಸಂದರ್ಭದಲ್ಲಿ ದೇವರ ಹೆಸರು ಹಾಗೂ ಶಾಪಾಶಯ-ಫಲಶ್ರುತಿಯನ್ನು ನಮೂದಿಸಿರುವಂತಿದೆ (೩೦ರಿಂದ ೩೮ನೆಯ ಸಾಲಿನವರೆಗೆ)

'... ಶ್ರೀಮನು । ಮಹಾಪ್ರಧಾನ ಮಾಯಿದೇವ ದಣ್ಣಾಯಕರುಂ ಮುಖ್ಯವಾಗಿ ದಕ್ಷಿ। ಣ ವಾರಣಾಸಿ ಅಭಿನವ ಶ್ರೀಶೈಳವೆನಿಪ್ಪ ಸೊಂನಲಿಗೆಯ । ಶ್ರೀ ಕಪಿಲಸಿದ್ಧ ಮಲ್ಲಿಕಾರ್ಜುನ ದೇವರ ಅಂಗಭೋಗ ರಂಗಭೋಗ ಜೀರ್ಣೋದ್ಧಾರ ಆವಾರಿಚ್ಚತ್ರಕ್ಕೆ ತದ್ದವಾಡಿ ಸಾಯಿರದೊಳಗಣ ... ಚೋರಹಾರಿಗೆಯಂ । ಸರ್ಬ್ಬನಮಸ್ಯವಾಗಿ ಕೊಟ್ಟ ಧರ್ಮ್ಮ ... ಯೀ ಧರ್ಮ್ಮಕ್ಕೆ ವಕ್ರಸ್ತರಾದವರು ಅಧೋಗತಿಗಿಳಿವರು ಮಂಗಳ ಮಹಾಶ್ರೀ ಶ್ರೀ

– ಈ ಸಿದ್ಧರಾಮನ ಜನಪ್ರಿಯ ವಚನದಲ್ಲಿ ಯೋಗರಮಣೀಯ ಕ್ಷೇತ್ರವೆನಿಸಿದ ಅಭಿನವ ಶ್ರೀಶೈಲವೆನ್ನುವಷ್ಟು ಪ್ರಸಿದ್ಧಿಯ ಸೊಂನಲಿಗೆಯಲ್ಲಿ ದಕ್ಷಿಣ ವಾರಣಾಸಿ ಎಂದೂ ಕರೆಸಿಕೊಂಡ ಈ ಸೊಂನಲಿಗೆಯಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನು ನೆಲೆಸಿದ ಕಾರಣ (ಸಿದ್ಧರಾಮನಿಂದ ಪ್ರತಿಷ್ಠೆ) ಆ ದೇವರ ಸೇವೆಗೆ ಗ್ರಾಮದಾನ ಮಾಡಿದ ವಿಷಯವಿದೆ. ಅದಾಗಿ ಸಿದ್ಧರಾಮನು ಜನತೆಯಲ್ಲಿ ಪರಮಾರಾಧ್ಯನಾಗಿದ್ದ ಕಾರಣ, ಶಾಸನದಲ್ಲಿ ಅವನ ವಚನ ಕೆತ್ತಿಸಿ, ದೇಗುಲದ ಸೇವಾಕಾರ್ಯಗಳಿಗೆ ಚೋರಹಾರಿಗೆ ಗ್ರಾಮದಾನ ಮಾಡಿ ಶಾಪಾಶಯವನ್ನು ತಿಳಿಸಲಾಗಿದೆ. ಶಾಸನಾರಂಭದಲ್ಲಿ ಬಂದಿರುವ ದೇವಸ್ತುತಿವಚನದ ಪಠ್ಯವನ್ನು ಗಮನಿಸಿದರೆ ಸಿದ್ಧರಾಮನು ಅಪ್ಪಿದ್ದ ಧರ್ಮದ ಸೈದ್ಧಾಂತಿಕ ನೆಲೆಯು ಅರ್ಥಪೂರ್ಣವಾಗಿ ಭಕ್ತಿ ಮಾನಸವನ್ನು ಮುದಗೊಳಿಸುತ್ತದೆ. ಗ್ರಾಮದ ಪ್ರಗತಿ, ದೇವಸಾನ್ನಿಧ್ಯ, ಗ್ರಾಮದಾನ ಇತ್ಯಾದಿ ಕಾರ್ಯಗಳ ಮಾಹಿತಿ ಇರುವಲ್ಲಿ ಸಾಮಾಜಿಕ ಹಿತಸ್ಪರ್ಶದ ದನಿಗಳು ಶಾಸನದ ಸಾಲುಗಳಲ್ಲಿಂದ ಕೇಳುವಂತಿದೆ.

ಲಭ್ಯವಿರುವ ಸುಮಾರು ಸಿದ್ಧರಾಮ ಸಂಬಂಧಿಯಾದ ೩೦ ಶಾಸನಗಳ ಪೈಕಿ ಕೆಲವು ಶಾಸನಗಳ ಆರಂಭದ ಸ್ತುತಿ ವಚನದಲ್ಲಿ, ಸಿದ್ಧರಾಮನ ವಚನದಲ್ಲಿ (ವಚನ ೩೦೦) ಬರುವಂತೆ "ಓಂ ಜಯ ಪರಮೇಶ್ವರ ...' ಎಂದು ಆರಂಭವಾಗಿದೆ. ಕೆಲವೆಡೆ ಶಾಸನಗಳಲ್ಲಿನ ರೂಢಿಯಂತೆ, 'ಸ್ವಸ್ತಿ ಶ್ರೀ ಯೋಂ ಜಯಪರಮೇಶ್ವರ ...' ಎಂದು ಪ್ರಸ್ತುತ ಶಾಸನಾರಂಭದಲ್ಲಿ ಕಾಣಿಸುತ್ತದೆ. ಗಮನಾರ್ಹವಾಗಿ ಈ ಶಾಸನಗಳಲ್ಲಿ ಸಿದ್ಧರಾಮನ 'ಓಂ ಜಯ ಪರಮೇಶ್ವರ ...' ಎಂದು ಆರಂಭವಾಗುವ 'ಒಂದು ವಚನ' ಮಾತ್ರ ಪುನರಾವರ್ತನೆಗೊಂಡು ಬಂದಿದೆ. ಹಾಗೂ ಆ ವಚನದ ಜನಪ್ರಿಯತೆ ಹಾಗೂ ಪಂಡಿತ ಮಾನ್ಯತೆಯ ಕುರುಹಾಗಿ ಕಾಣುತ್ತದೆ.



ಮಹಾರಾಷ್ಟ್ರ, ಉತ್ತರ ಕರ್ನಾಟಕದಲ್ಲಿ ಸಿದ್ಧರಾಮ ಸಂಬಂಧಿಯಾದ ವಚನವು ಹೆಚ್ಚಿನ ಸಂಖ್ಯೆಯಲ್ಲಿ ೩೦ ಶಾಸನಗಳ ಪೈಕಿ ಕಾಣಬರುತ್ತವೆ. ದಕ್ಷಿಣ ಕರ್ನಾಟಕದ ತುಮಕೂರು ಜಿಲ್ಲೆಯ ಗುಬ್ಬಿ, ಚಿಕ್ಕನಾಯಕನಹಳ್ಳಿ ಹಾಗೂ ಚಿತ್ರದುರ್ಗ ಇತ್ಯಾದಿ ಕಡೆ ಅಲ್ಲೊಂದು ಇಲ್ಲೊಂದರಂತೆ ಶಾಸನಗಳು ಕಾಣಬರುತ್ತವೆ. ಸಿದ್ಧರಾಮನ ಜಾತ್ರೆ, ಗದ್ದುಗೆ, ಉತ್ಸವ ಇತ್ಯಾದಿ ವಿಶಿಷ್ಟ ಆಚರಣೆಗಳ ಮೂಲಕವಾಗಿ ಸಿದ್ಧರಾಮ ಸಂಬಂಧೀ ಅಂಶಗಳು (ರುದ್ರ)ತೀರ್ಥ, ಶಿಲ್ಪ, ಲಿಂಗರೂಪ, ಚಿತ್ರಗಳ ಮೂಲಕ ಕಂಡುಬರುತ್ತವೆ. ಅಲ್ಲದೆ, ಸಿದ್ಧರಾಮ ಇಲ್ಲೆಲ್ಲ ಶರಣರೊಡನಾಡಿಯಾಗಿ ಸಂಚರಿಸಿದ ಐತಿಹ್ಯಗಳು ಪರಂಪರೆಯಿಂದ ಕೂಡಿ ಬೆಳೆದಿವೆ.

ಶಾಸನಗಳಲ್ಲಿ, ಸಿದ್ಧರಾಮನ ಈ ಒಂದೇ ವಚನ ಪ್ರಮುಖವಾಗಿ ಆರಂಭಕ್ಕೆ ಸ್ತುತಿವಚನವಾಗಿ ಕಂಡುಬರಲು ಕಾರಣವೇನು? ಅದು ಮುಖ್ಯವಾಗಿ ಅಲ್ಲಮಪ್ರಭುವು ಸಿದ್ಧರಾಮನಿಗೆ ಉಪದೇಶ ಮಾಡಿದ 'ಮಂತ್ರಗೋಪ್ಯ'ದ 'ಪದ' (೨೨)ದಿಂದ ಅವನ ವಚನ ಹಾಗೂ ಶಾಸನೋಕ್ತದಲ್ಲಿ ಪ್ರತಿಧ್ವನಿಸಿದೆ. ಪ್ರಭುದೇವರ ಹೆಸರು ಸಿದ್ಧರಾಮ ಸಂಬಂಧೀ ಯಾವ ಶಾಸನಗಳಲ್ಲಿ ಕಾಣಬರದಿದ್ದರೂ, ಪ್ರಭುವಿನ 'ಮಂತ್ರಗೋಪ್ಯ' ಪದದ ಪ್ರಭಾವ ಮಾತ್ರ ಶಾಸನಗಳ ಸ್ತುತಿವಚನ ಮೇಲಾಗಿರುವುದು ಎದ್ದು ಕಾಣುತ್ತದೆ. ಇದಲ್ಲದೆ ಶಾಸನಗಳಲ್ಲಿ 'ಕಪಿಲಸಿದ್ಧ ಮಲ್ಲಿಕಾರ್ಜುನ' ಹಾಗೂ ಕೆಲವೆಡೆ 'ಸಿದ್ಧರಾಮ'ನ ಹೆಸರುಗಳು ಬಹುಜನಪ್ರಿಯವಾಗಿ ಕಾಣಿಸಿಕೊಂಡಿವೆ.

ಪ್ರಭುದೇವರು ಸಿದ್ಧರಾಮನಿಗೆ ಬೋಧಿಸಿದ 'ಷಟ್‌ಸ್ಥಲ ಮಂತ್ರಗೋಪ್ಯ'ವು ಷಟ್‌ಸ್ಥಲ ಲಿಂಗಾಂಗ ಮಹೋಪದೇಶವಾಗಿದೆ. ಅದು ಸಮಾಧಿಯೋಗದ ಸ್ವರೂಪದಲ್ಲಿದೆ. ಅದು ರಹಸ್ಯ, ಅತಿಗೋಪ್ಯವಾಗಿ ಉಪದೇಶಿಸಲ್ಪಟ್ಟಿತೆಂದು ಹೇಳಲಾಗಿದೆ. ಸದ್ಯಕ್ಕೆ ಶಾಸನಸೂಚಿತ ವಚನಕ್ಕೆ ಪ್ರೇರಕವಾದ ಮಂತ್ರಗೋಪ್ಯದ ೨೨ನೇ ಪದ ಹೀಗಿದೆ:

ತುಟ್ಟತುದಿಯ ಕೊನೆಯ ಮೊನೆಯ ಮೇಲೊಂದು।
ಮುಟ್ಟಬಾರದ ಘನವ ನೋಡಿ ಕಂಡ ॥

ಮತ್ತೆ ಸೋಹಂ ಸೋಹಮೆಂದೆಂಬ ಮದವಳಿದು ॥
ಚಿತ್ತ ಬ್ರಹ್ಮ ಶುದ್ಧ ಮುಗ್ಧವಾಯಿತ್ತು

ಸಕಲ ತತ್ತ್ವಗಳನ್ನು ಮೀರಿ ತಿಳಿದು ಅರಿವುಗೊಂಡ ಮನಕ್ಕೂ ಪರಬ್ರಹ್ಮ ನಿಲುಕದೆ ಹೋಗಿದೆ. ತುಟ್ಟತುದಿಯ ಕೊನೆಯ ಮೊನೆಯ ಮೇಲೆ ಒಂದು ಕುಚಿತ್ತಹಸ್ತಗಳಿಂದ ಮುಟ್ಟಬಾರದ ಘನವನ್ನು ಸುಜ್ಞಾನದೃಷ್ಟಿಯಿಂದ ಕಂಡುಕೊಳ್ಳಲಾಯಿತು. ಸಮಾಧಿಯೋಗದೊಳಗಿದ್ದೇನೆ ಎಂಬ ಯೋಗಭ್ರಮಿತರಿಗೆ ಪರಶಿವತತ್ತ್ವ ಅಗೋಚರವಾಗಿರುತ್ತದೆ. ನಾನೇ ಆ ಪರಶಿವ ಎಂಬ ದ್ವೈತಾಹಂಕಾರದ ಆಹಮಹಿಕೆಯನ್ನು ಕಳೆದುಕೊಂಡು ಪರಬ್ರಹ್ಮ ಸಂಬಂಧವಾದ ಮೇಲೆ ಶುದ್ಧವಾದ ಪ್ರಸಾದಕಾಯಕ್ಕೆ ಪರಶಿವ ತತ್ತ್ವ ಸಮರಸದಿಂದ ಕೂಡಿತ್ತು ಎಂಬುದು ಮಥಿತಾರ್ಥ.

ಇದಕ್ಕೆ ಸಂವಾದಿಯಾಗಿ 'ಮಂತ್ರಗೋಪ್ಯ'ದಲ್ಲಿ 'ಅಂಗಕಳೆ ಲಿಂಗದಲಿ ಲಿಂಗಕಳೆ ಅಂಗದಲಿ ಅಂಗಲಿಂಗವೆಂಬುಭಯವಳಿದು । ಮಂಗಳ ಮಹಾಬೆಳಗಿನ ಬೆಳಗಿನೊಳಗೆ । ಕಂಗಳೇ ಪ್ರಾಣವಾಗಿರುತಿರ್ದನು' ಎಂಬ ಪದ (೧೩)ವು ಶಾಸನದಲ್ಲಿ 'ಜ್ಯೋತೀಶ್ವರ' ಸಂಬಂಧಗೊಂಡಿರುವಂತಿದೆ.

**(ವಚನ ಸಂಪುಟದಲ್ಲಿ) ಸಿದ್ಧರಾಮೇಶ್ವರರ ವಚನ:**

ಓಂ ಜಯ ಪರಮೇಶ್ವರಂ ಪರಮಾತ್ಮಂ
ಈಶ್ವರನುರ್ವಿಪರ್ವಿ ಅಡಗಿಕೊಂಡಿಪ್ಪನು
ಓರ್ಬ್ಬಣಿಯಾಗಿ ಯೋಗಿಗಳ ಮನದ

**ಶಾಸನಗಳಲ್ಲಿ ಸಿದ್ಧರಾಮೇಶ್ವರ ವಚನ:**

ಶ್ರೀ ಓಂ ಜಯ ಪರಮೇಶ್ವರ ಪರಮಾತ್ಮ
ಈಶ್ವರನು ವುರ್ಬಿಯಡಂಗಿ
ಕೊಂಡಿರ್ಪನೆ ಓರ್ಬಣ್ಣಿಗೆಯಾಗಿ
ಯೋಗಿಗಳ ಮನದ
ಕೊನೆಯ ಜೋತಿಶ್ವರನುಂ
ವ್ರಿಷಭರೂಪಾಗಿ ಯಜಮಾನನುಂ
ಆಚಾರ್ಯ್ಯನುಂ ತಾನೆಯಾಗಿ

ಪರಶಿವ, ಕಪಿಲಸಿದ್ಧಮಲ್ಲಿಕಾರ್ಜುನ ಯೋಗಿಗಳ ಮನದುತ್ತುಂಗ ಶೃಂಗದಲ್ಲಿರುವಾಗ ಅವನನ್ನು ಸಾಧಿಸಲು ಬೇಕಾದ **ಪ್ರಸಾದಕಾಯ** ಅಂದರೆ ಶುದ್ಧ ಸಿದ್ಧ ಮನದ ಯೌಗಿಕ ಶೀಲ ಬೇಕು ಎಂಬ ಭಾವವಿಲ್ಲಿದೆ. 'ಯೋಗಿಯ ಶರೀರ ವ್ಯಥಾಯ ಹೋಗಲಾಗದಯ್ಯ' (ವಚನ ೯೫೮) ಎಂಬ ಸಿದ್ಧರಾಮನ ವಚನೋಕ್ತಿ ಇಲ್ಲಿ ಪ್ರಾಸಾದಿಕವಾಗಿ ಅಭಿವ್ಯಕ್ತಿಗೊಂಡಿದೆ. ಆ ಶೃಂಗದಲ್ಲಿ ಜ್ಯೋತೀಶ್ವರನಾಗಿ ಪರಶಿವನಿದ್ದಾನೆ. ಅದನ್ನು ಕಾಣುವ ಬಗೆ ಹೇಗೆ

ಎಂಬುದರ ವಿವರವೂ ಮಂತ್ರಗೋಪ್ಯದಿಂದ ಸಿದ್ಧರಾಮನಿಗೆ ಸಾಧ್ಯವಾದ ವಿಷಯ, ಸಿದ್ಧರಾಮ ಅದನ್ನು ವಚನಿಸಿದ್ದು, ಜನತೆ ಹಾಗೂ ಪಂಡಿತವರ್ಗ ಅದನ್ನು ಭಕ್ತಿಯಿಂದ ಮಾನಿಸಿ ಪರಂಪರೆಗೆ ಒಯ್ದು ಬಗೆ ಶಾಸನಗಳಿಂದ ತಿಳಿಯುತ್ತದೆ. ಸಿದ್ಧರಾಮನ ಸಾಮಾಜಿಕ ಹಾಗೂ ಮಂಗಳಕಾಯಕಗಳು ಜನತೆಯ ಆದರಕ್ಕೆ ಒಳಗಾಗಿದ್ದ ಸಾಕ್ಷಿಯಾಗಿ ಶಾಸನಗಳಲ್ಲಿ ಬಿಂಬಿತವಾಗಿವೆ.

ಸೊನ್ನಲಿಗೆ ಮೊದಲಿಗೆ ಸಿದ್ಧರಾಮನಿಗೆ ಕೇವಲ ಕರ್ಮಯೋಗ ಕ್ಷೇತ್ರವಾಗಿತ್ತು. ಶಿವಯೋಗ ಸಾಧನ ಸಂಗಮವಾದ ಮೇಲೆ ಪವಿತ್ರವಾದ ಅಭಿನವ ಶ್ರೀಶೈಲಮಲ್ಲಿಕಾರ್ಜುನ ಸನ್ನಿಧಿಯಾಯಿತು. ಕತ್ತಲೆ ಕಳೆದ ಜ್ಯೋತೀಶ್ವರನಾದ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗಯ್ಯನಾಗಿ ಸಿದ್ಧರಾಮನಿಗೇನೋ ಒದಗಿದ; ಆದರೆ 'ಕಪಿಲಸಿದ್ಧಮಲ್ಲಿಕಾರ್ಜುನ' ಎಂಬ ಅಂಕಿತ ಸಿದ್ಧರಾಮನ ಭಕ್ತಿ ಆದರಕ್ಕೆ ಕಾರಣವಾದದ್ದು ಹೇಗೆ?

'ಕಪಿ' ಎಂದರೆ 'ಸೂರ್ಯ' ಎಂಬ ಅರ್ಥ ಸಂಸ್ಕೃತ-ಕನ್ನಡ ಶಬ್ದಕೋಶದಲ್ಲಿದೆ. ಸ್ವಯಂ ಪ್ರಕಾಶಿತನಾದ ಸೂರ್ಯನಾಗಿ ಮಲ್ಲಿಕಾರ್ಜುನ ಲಿಂಗವು ಕತ್ತಲೆ ಕಳೆದು ಸಿದ್ಧರಾಮನಿಗೆ ಯೋಗಲಿಂಗವಾದ. ಶರೀರವೆ ಶಿವದೀಕ್ಷೆಯಿಂದ (ಶಾಸನೋಕ್ತ 'ಜ್ಯೋತೀಶ್ವರನುಂ ವ್ರಿಷಭನ ರೂಪಾಗಿ') ಲಿಂಗ ಶರೀರವಾಯಿತು. ಈ ಶರೀರ ಲಿಂಗಶರೀರವಾಗಲು ಇಷ್ಟಲಿಂಗವೆ ಆಧಾರವಾಯಿತು. ಅಂತಾಗಿ ಲಿಂಗಕ್ಕೆ ಲಿಂಗವೆ ಆಧಾರವಾಗಿ 'ಯೋಗಲಿಂಗ'ವಾಯಿತು.

*(ಮುಂದುವರೆಯುತ್ತದೆ)*

ಅಡಿಟಿಪ್ಪಣಿಗಳು:

೧. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ: ೧೦, ಬಿಜಾಪುರ ಜಿಲ್ಲೆ, ಮುದ್ದೇಬಿಹಾಳ, ೩೩ (ಫಡೆಕನೂರು, ಕ್ರಿ.ಶ.೧೨೫೩) ಕ.ವಿ.ವಿ. ಹಂಪಿ.
೨. ಸಿದ್ಧರಾಮೇಶ್ವರ ವಚನ ಸಂಪುಟ (ಸಂ.) ಡಾ. ಎಸ್. ವಿದ್ಯಾಶಂಕರ್, ಕನ್ನಡ ಪುಸ್ತಕ ಪ್ರಾಧಿಕಾರ, ೨೦೦೧, ವಚನ ೧೪೪೭.
೩. ಸಿದ್ಧರಾಮ ಚಾರಿತ್ರ, ಪೀಠಿಕೆ, ಪು.xivii (೧೯೭೫) ಸಿದ್ಧರಾಮೇಶ್ವರ ವಚನ ಸಂಪುಟ, ಅದೇ, ಪ್ರಸ್ತಾವನೆ, ಪು.xxv
೪. ಸಿದ್ಧರಾಮೇಶ್ವರ ವಚನ ಸಂಪುಟ, ಅದೇ., ವಚನ ೬೯೭.
೫. ಅದೇ., ವಚನ ೧೮೪೬
೬. ಬಸವ ವಚನಾಮೃತ (ಸಂ.) ಡಾ. ಎಲ್. ಬಸವರಾಜು, ಬಸವ ಸಮಿತಿ, ಬೆಂಗಳೂರು (೭ನೆಯ ಮುದ್ರಣ, ೨೦೦೦), ವಚನ ೩, ಪು.೧೨.
೭. ಸಿದ್ಧರಾಮೇಶ್ವರ ವಚನ ಸಂಪುಟ, ಅದೇ ವಚನ ೩೮೮.
೮. ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧೦, ಬಿಜಾಪುರ ಜಿಲ್ಲೆ, ಅದೇ, ಇಂಡಿ ೨೩, (ಚೊರಗಿ, ಕ್ರಿ.ಶ.೧೧೯೦)
೯. ಸಂಸ್ಕೃತ-ಕನ್ನಡ ಶಬ್ದಕೋಶ, ಸಂಪುಟ ೨, ೧೯೯೯, ಪು.೫೯೨





ಸ್ಮರಣೆ

# ಸಿದ್ಧಗಂಗೆಯಲ್ಲಿ ಶ್ರೀ ಅಟವೀಶ್ವರರು

– ಕೋ.ರಂ. ಬಸವರಾಜು *

ನಿನ್ನ ನೆನೆವುದೆ ಮೌನಜಪತಪ
ನಿನ್ನ ನೆನೆವುದೆ ಯೋಗಭೋಗವು
ನಿನ್ನ ನೆನೆವುದೆ ಶಾಂತಿದಾಂತಿಯು ಸರ್ವಸಾಧನವೂ
ನಿನ್ನ ನೆನೆವುದೆ ಶಕ್ತಿಯುಕ್ತಿಯು
ನಿನ್ನ ನೆನೆವುದೆ ಭಕ್ತಿಮುಕ್ತಿಯು
ಸನ್ನುತನೆ ಕೃಪೆಮಾಡಿ ಪಾಲಿಪುದೆಮ್ಮನಟವೀಶ
(ಅ. ಗುರುಭಕ್ತಿಸಾರ)



ಶ್ರೀ ಗೋಸಲ ಸಿದ್ಧೇಶ್ವರರಿಂದ ಸ್ಥಾಪಿತವಾದ ಶ್ರೀ ಸಿದ್ಧಗಂಗೆಯ ನಿಸರ್ಗ ಸೊಬಗಿನ ಶಿವಯೋಗ ಭೂಮಿಯಿಂದ ಆಕರ್ಷಿತರಾಗಿ ಅನೇಕ ಶಿವಯೋಗಿಗಳು ಇಲ್ಲಿ ನೆಲೆನಿಂತು ಅನುಷ್ಠಾನ ಅನುಸಂಧಾನಾದಿಗಳನ್ನು ಮಾಡಿದ್ದಾರೆ. ತನ್ಮೂಲಕ ಸಿದ್ಧಗಂಗೆಯ ಮಹಿಮೆಗೆ ಕಾರಣೀಭೂತರಾಗಿದ್ದಾರೆ. ಅಂಥ ಶಿವಯೋಗಿಗಳಲ್ಲಿ ಶ್ರೀಮದಟವೀಶ್ವರರು ವಿಶೇಷ ಗಣ್ಯರಾಗಿದ್ದಾರೆ.

ಶ್ರೀ ಮದಟವೀಶ್ವರರು ಸಿದ್ಧಗಂಗೆಗೆ ಬರುವ ಪೂರ್ವದಲ್ಲಿ ಅಮರಗೊಂಡದಲ್ಲಿ (ಗುಬ್ಬಿ) ಗೋಸಲ ಚನ್ನಬಸವೇಶ್ವರರ ಗದ್ದುಗೆಯ ಪಕ್ಕದಲ್ಲಿರುವ ತೊರೆಯ ದಡದಲ್ಲಿ ಮಠವೊಂದನ್ನು ಸ್ಥಾಪಿಸಿಕೊಂಡು ಅನುಷ್ಠಾನ ಮಾಡುತ್ತಾ ಆ ಗೋಸಲ ಚನ್ನಬಸವೇಶ್ವರ ಸ್ವಾಮಿಯ ಬೆಳ್ಳಿ ಪಾಲಕಿ ಉತ್ಸವಾದಿ ಕೈಂಕರ್ಯಗಳಿಂದ ಭಕ್ತಪ್ರಿಯರಾಗಿರುತ್ತಾರೆ. ನಂತರ ತೊಟ್ಟಿಲುಕೆರೆಯಲ್ಲಿ ವಿರಕ್ತ ಮಠವನ್ನು ಕಟ್ಟಿ ಅನೇಕಾನೇಕ ಲೋಕೋಪಕಾರಕ ಸೇವೆಯಲ್ಲಿ ತೊಡಗಿರುತ್ತಾರೆ. ಆನಂತರದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ದಯಮಾಡಿಸುವರು. ಅವರ ಆಗಮನದಿಂದ ಸಿದ್ಧಗಂಗೆಯ ಕಾರ್ಯ ಕ್ಷೇತ್ರಕ್ಕೊಂದು ಹೊಸ ಚೈತನ್ಯ ಬಂದಂತಾಗುತ್ತದೆ. ಅಟವೀಶ್ವರರ ಆಗಮನದ ಮೊದಲೇ ಶ್ರೀ ಸಿದ್ಧಗಂಗೆಯಲ್ಲಿ ಗುರುಪರಂಪರೆಯ ಬಳಿವಿಡಿದು ಬಂದ ಶ್ರೀ ಸಿದ್ಧಲಿಂಗಸ್ವಾಮಿಗಳೆಂಬುವರು ಮಠಾಧಿಪತಿಗಳಾಗಿದ್ದರು. ಅವರು ಕ್ಷೇತ್ರಾಭಿವೃದ್ಧಿ ಕಾರ್ಯಗಳಲ್ಲಿ ಅಷ್ಟಾಗಿ ತೊಡಗಿಸಿ ಕೊಂಡಿರಲಿಲ್ಲ. ತಾವಾಯಿತು ತಮ್ಮ ಲಿಂಗತಪೋನುಷ್ಠಾನವಾಯಿತು ಎಂಬಂತಿದ್ದರು.

ಆದರೆ ಶ್ರೀ ಅಟವೀಶ್ವರರು ಸಿದ್ಧಗಂಗೆಗೆ ಬರುವ ಹೊತ್ತಿಗೆ 'ಸಿದ್ಧಗಂಗೆಗೆ ಹೋಗಿ ಗಂಗಾಪೂಜೆ ಮಾಡಿದರೆ ಸಂತಾನ ಭಾಗ್ಯ ಪ್ರಾಪ್ತವಾಗುತ್ತದೆ. ಗಂಗಾಸ್ನಾನ ಮಾಡಿದರೆ ಕುಷ್ಠರೋಗದಂಥ ರೋಗಗಳು ಪರಿಹಾರವಾಗುತ್ತವೆ. ಗಂಗಾ ಪಾನ ಮಾಡಿದರೆ ಭವರೋಗ ಕಳೆಯುತ್ತದೆ' ಇತ್ಯಾದಿಯಾಗಿ ಸಿದ್ಧಗಂಗಾ ಕ್ಷೇತ್ರದ ಮಹಿಮೆಯ ವಾರ್ತೆ ನಾಡಿನಾದ್ಯಂತ ಪಸರಿಸಿತ್ತು. ಭಕ್ತಜನ ವಿಶೇಷವಾಗಿ ಸೋಮ, ಮಂಗಳ, ಶುಕ್ರವಾರದಂತಹ ವಾರದ ದಿನಗಳಲ್ಲಿ ಎತ್ತಿನ ಬಂಡಿ ಹೂಡಿ ಕೊಂಡು ಸಿದ್ಧಗಂಗೆಗೆ ಬಂದು ಶ್ರೀ ಗೋಸಲ ಸಿದ್ಧೇಶ್ವರರಿಂದ ಉದ್ಭವವಾದ ಅಥವಾ ಸಿದ್ಧಿಸಿದ ಗಂಗೆಗೆ ಗಂಗಾಪೂಜೆ ಸಲ್ಲಿಸಿ, ಸಿದ್ಧಲಿಂಗೇಶ್ವರರನ್ನು ಅರ್ಚಿಸಿ, ತಾವೇ ತಂದ ಪಡಿ ಪದಾರ್ಥಗಳಿಂದ ಪಾಕಮಾಡಿ ಎಡೆ ದಾಸೋಹಗಳನ್ನು ಮಾಡಿ ಪ್ರಸನ್ನಾತ್ಮರುಗಳಾಗಿ ಹೋಗುತ್ತಿದ್ದರು.

ಇತ್ತ ಶ್ರೀ ಮದಟವೀಶ್ವರರು ಸಿದ್ಧಗಂಗೆಯ ಬೆಟ್ಟದ ಮೇಲಿನ ಗವಿಯಲ್ಲಿಯೇ ತೋಂಟದಾರ್ಯನ ಪದ ಸಾನ್ನಿಧ್ಯದಲ್ಲಿ ಲಿಂಗತಪೋಸಾಮ್ರಾಜ್ಯದಲ್ಲಿ ಕಾಲ ಕಳೆಯುತ್ತಿರುವಾಗ ಯೋಗಾಯೋಗವೆಂಬಂತೆ ಆ ಗುರುವಿನ ಗುರುತ್ವಾಕರ್ಷಣೆಗೊಳಗಾಗಿ ಮಠಕೂರು ನಂಜುಂಡಶಿವಯೋಗಿಗಳ ಆಗಮನವಾಗುತ್ತದೆ. ಒಬ್ಬರು ಮಹಾಶಿವಯೋಗಿಗಳು, ಇನ್ನೊಬ್ಬರು

* ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು, ಸಿದ್ಧಗಂಗಾ ಮಠ

ಮಹಾಪಂಡಿತರು, ಮಹಾದಾರ್ಶನಿಕರು, ಇವರಿಬ್ಬರ ಸಂಮ್ಮಿಲನದಿಂದ ಸಿದ್ಧಗಂಗೆಯ ಕಾರ್ಯ ಚಟುವಟಿಕೆಗಳು ಗರಿಗೆದರುತ್ತವೆ.

"ಇಂತೈತರ್ಪ ಭಕ್ತರ ಸಂದಣಿಯಂ ಕಂಡೊಂದು ದಿನಂ ಅಡವಿಸ್ವಾಮಿಯ ಚಿತ್ತದೋಳ್ ದರ್ಶನಾ ಶೀರ್ವಾದ ಮುಂತಾದ ಬಯಕೆಯಿಂದೈತರ್ಪ ಭಕ್ತರ ಸಮೂಹಕ್ಕೆ ಕ್ಷೇತ್ರದಲ್ಲಿ ಸದಾ ದಾಸೋಹ ನಡೆಯುವುದಾದರೆ ಬಹು ಪರಿಣಾಮವಾಗುವುದಲ್ಲವೆ?" "ಸರ್ವಸಮ್ಮತವಾದುದು ತಮ್ಮೊಂದೂಡೆ" ಎಂಬ ಇಬ್ಬರ ಸಮಾಲೋಚನೆಯಿಂದ ಹಿಂದೆ ಇದ್ದ ದಾಸೋಹ ನಿತ್ಯದಾಸೋಹವಾಗಿ ಹೊತ್ತಿಸಿದ ಬೆಂಕಿ ಆರದಂತಹ ಶ್ರೀಕ್ಷೇತ್ರದ ನಡವಳಿಕೆಯಾಗುತ್ತದೆ. ಆ ಇಬ್ಬರ ದೂರದೃಷ್ಟಿಯಿಂದ ಸಂಸ್ಕೃತ ವೇದಪಾಠಶಾಲೆ ತೆರೆಯಲ್ಪಡುತ್ತದೆ. ಹೀಗೆ ಈ ಅನ್ನದಾಸೋಹ-ಜ್ಞಾನ ದಾಸೋಹದ ವ್ಯವಸ್ಥೆ ಏಕಕಾಲಿಕವಾಗಿ ಬೆಟ್ಟದ ಮೇಲ್ಭಾಗದ ಗವಿಮಂಟಪದಲ್ಲಿಯೇ ಪ್ರಾರಂಭವಾಗುತ್ತವೆ. ಅಟವೀಶ್ವರರು ಮಠದ ಪಾಕಶಾಲೆಯ ಮೊದಲ ದಾಸೋಹಿಯಾದರೆ ನಂಜುಂಡಶಿವಯೋಗಿಗಳು ಪಾಠ ಶಾಲೆಯ ಮೊದಲ ಗುರುವೆನಿಸುತ್ತಾರೆ.

ಹೀಗೆ ಶ್ರೀ ಮದಟವೀಶ್ವರರು ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಅನ್ನದಾಸೋಹ ವಿದ್ಯಾದಾಸೋಹಗಳ ನಡವಳಿಕೆಗಳಿಗೆ ನಾಂದಿ ಹಾಡಿದುದಲ್ಲದೆ ಉಭಯ ದಾಸೋಹಕ್ಕೂ ಆರಂಭಿಕರಾದರು. ಇವರ ಕಾಲದಲ್ಲಿ ಸಿದ್ಧಗಂಗೆಯ ಕೀರ್ತಿ ಮನೆಮಾತ್ತೆಯಾಯಿತು. ನಾಡಿನ ನಾನಾಮೂಲೆಗಳಿಂದ ನಾನಾ ಆಧಿವ್ಯಾಧಿಗಳಿಗೊಳಗಾದ, ನಾನಾ ಗ್ರಹಭೀತಿಗಳಿಂದ ನರಳುವ, ನಾನಾ ಚಿಂತೆಯಲ್ಲಿ ಮುಳುಗಿರುವ ಜನರು ಬಂದು ಅಟವೀಂದ್ರರ ಗುರುಚರಣಕ್ಕೆ ಹಣೆ ಮಣಿದು, ಅವರು ತಮ್ಮ ಶಿವಹಸ್ತದಿಂದ ಮಂತ್ರಿಸಿಕೊಟ್ಟ ವಿಭೂತಿ ಧೂಳಿತವನ್ನು ಹಣೆಯಲ್ಲಿ ಧರಿಸಿ 'ಒಳ್ಳೆಯದಾಗಲಿ' ಎಂಬ ಅಭಯವಾಣಿಯನ್ನು ಆಶೀರ್ವಾದವನ್ನು ಪಡೆದು ಸರ್ವಭವ ರೋಗ ಮುಕ್ತರಾಗಿ ದರ್ಶನ ಭಾಗ್ಯವನ್ನು ಹೊತ್ತು ಸಂಭ್ರಮಿಸಿ ಹೋಗುತ್ತಿದ್ದರು. ಇದರ ಜೊತೆಗೆ ಕ್ಷೇತ್ರಾಧಿಪತಿ ತೋಂಟದಾರ್ಯನ ಉತ್ಸವವನ್ನು ಶರನ್ನವರಾತ್ರಿಯಲ್ಲಿ ಜಾತ್ರೋತ್ಸವದ ರೀತಿಯಲ್ಲಿ ಪ್ರಾರಂಭಿಸಿದರು. ಜಾತ್ರೆಯ ವೈಭವವನ್ನು ಮತಕೂರು ನಂಜುಂಡಶಿವಯೋಗಿಗಳವರು ತಮ್ಮ ಅಟವೀಶ ಚರಿತ್ರೆಯಲ್ಲಿ ವರ್ಣಿಸಿದ್ದಾರೆ.

'ಭಲಾರೆ ಜಾತ್ರೆಯಿದು ಭಲಾರೆ ಜಾತ್ರೆಯಿದು<br>
ಅಪಾರ ವಾದ್ಯಗಳಪಾರಜ್ಯೋತಿಗ<br>
ಳಪಾರ ಸಂಭ್ರಮಮುಪಮಿಸಲಸದಳ ॥ ಭಲಾರೆ<br>
ಚಡಾಳಕಾಂತಿಯ ಕಿಡೀ ಸೂಸುತಿಹ<br>
ಗಡಾಬಾಜುಗಳ ಬೆಡಂಗ ನಿಟ್ಟಿಸು ॥ ಭಲಾರೆ<br>
ಬಗೆಬಗೆ ಬಾಣಗಳಗೋ ಹಾರುತಿವೆ<br>
ಪಗಲ್ ಬತ್ತಿಗಳ್ ಝಗಾಯಿಸುತಿವೆ ॥ ಭಲಾರೆ ...

ಇದೆಲ್ಲದುದಕ್ಕಿಂತಲೂ ಶ್ರೀ ಅಟವೀಶ್ವರರು ಸಿದ್ಧಗಂಗೆಗೆ ಕೊಟ್ಟ ಮಹತ್ತರ ಕೊಡುಗೆಯೆಂದರೆ ಶ್ರೀಮದುದ್ದಾನ ಶಿವಯೋಗಿಗಳವರನ್ನು ಪೀಠಾಧಿಪತಿಗಳನ್ನಾಗಿ ನಿಯೋಜನೆ ಮಾಡಿದ್ದು. ಲಕ್ಕೂರು ರುದ್ರಪ್ಪನವರು (ಉದ್ದಾನಶ್ರೀಗಳವರ ಪೂರ್ವಾಶ್ರಮದ ಹೆಸರು) ತೋರಿದ ಲೋಕೋತ್ತರ ಲಿಂಗ ಕ್ರಿಯೆಗಳನ್ನು ಕಂಡು ಶ್ರೀ ಅಟವೀಶರು ಬೆರಗಾದರು. ರುದ್ರಪ್ಪನು ತನ್ನ ಶಿವಹಸ್ತದಿಂದ ಪಾಕಗೈದು ಪ್ರಸಾದವನ್ನು ನೀಡಿದುದರ ಫಲವಾಗಿ ಬಹಳ ಕಾಲದಿಂದಿದ್ದ ಅವರ (ಅಟವೀಶರ) ಅಸ್ತಮಾವ್ಯಾಧಿ ನಿವಾರಣೆಯಾದುದು; ಕಾರಗಾಲದ ನಟ್ಟಿರುಳು ಪಂಜಿನ ಬೆಳಕಿನಲ್ಲಿ ಸೌದೆ ಗಾಡಿ ಗಳನ್ನು ಹೊಡೆತಂದುದು; ಮಲೆನಾಡ ಮನ್ನೆಯರಾದ ದೇವಪ್ಪಗೌಡರಿಗೆ ಹಿಡಿದಿದ್ದ ಭೂತಚೇಷ್ಟೆಯನ್ನು ಬಿಡಿಸಿದುದು, ಮುಂತಾದ ಅತಿಮಾನುಷ ಹಾಗೂ ಅಸಾಮಾನ್ಯ ಕ್ರಿಯೆಗಳನ್ನು ಪರಿಭಾವಿಸಿ 'ಈತನೀತನೇ ಈ ಪೀಠಕ್ಕಧಿಪತಿ, ನಾನೇನಿದ್ದರೂ ಮಾರ್ಗದರ್ಶನ ಮಾಡುವವ ನಷ್ಟೆ' ಎಂಬುದಾಗಿ ಮನೋನಿಶ್ಚಯ ಮಾಡಿದರು. ಅದರಂತೆ ಅನತಿಕಾಲದಲ್ಲಿಯೇ ಲಕ್ಕೂರ ರುದ್ರಪ್ಪನನ್ನು ಸಿದ್ಧಗಂಗೆಯ ಮಠಾಧಿಪತಿಯನ್ನಾಗಿ ಮಾಡಿದರು.

ಶ್ರೀಮದ್ ಅಟವೀಶ್ವರರು ೧೯೧೧ರಲ್ಲಿ ಲಿಂಗೈಕ್ಯರಾದ ನಂತರವೂ ತಮ್ಮ ದಿವ್ಯವಾದ ಅದೃಶ್ಯವಾದ ಅಭಯ ಹಸ್ತವನ್ನು ಚಾಚುತ್ತಾ, ಉದ್ದಾನ ಶಿವಯೋಗಿಗಳನ್ನು ಆಶೀರ್ವದಿಸುತ್ತಾ ಬಂದರು. ಕ್ಷೇತ್ರದ ಅಭಿವೃದ್ಧಿಯಲ್ಲಿ ಕೈ ಹಿಡಿದು ಮುನ್ನಡೆಸಿದರು. ಅಡವಿಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಅವರ ತೋರುಗದ್ದುಗೆಯನ್ನು ಕಟ್ಟಿಸಲು ಉದ್ದಾನಶ್ರೀಗಳವರ ಕೈಲಿ ಯತ್ಕಿಂಚಿತ್ ಧನದ್ರವ್ಯವೂ ಇರಲಿಲ್ಲ. ಗದ್ದುಗೆಗಾಗಿ ಭೂಶುದ್ಧಿ ಮಾಡಿ ವಾಸ್ತು ನಿರ್ಣಯಿಸಿ 'ಏನು ಮಾಡುವುದು' ಎಂದು ಚಿಂತಾಮಗ್ನರಾದರು. ಆಗ ಅಂದು



ಉದ್ದಾನಶಿವಯೋಗಿಗಳವರ ಶಿವ ಸ್ವಪ್ನದಲ್ಲಿ 'ನಾನಿದ್ದೇನೆ ಆರಂಭಿಸು' ಎಂಬ ಧ್ವನಿ ಕೇಳಿತು. ಮರುಹೊತ್ತಾರೆ ಶಿವಯೋಗಿಗಳು ಲಿಂಗಾರ್ಚನೆಗೈದು ಶಾಂತಧೀವದನರಾಗಿ ಮಠದ ಮುಂಭಾಗಕ್ಕೆ ದಯ ಮಾಡಿಸಿದ ಕ್ಷಣ ಹೊತ್ತಿನಲ್ಲಿಯೇ ಆಂಧ್ರದಿಂದ ಒಬ್ಬ ರೆಡ್ಡಿ ಭಕ್ತ ದಂಪತಿಗಳು ಬಂದು ನಮಸ್ಕಾರ ಹಾಕಿ ಸಾವಿರಾರು ರೂಪಾಯಿಗಳನ್ನು ದಾನರೂಪದಲ್ಲಿ ಅರ್ಪಿಸುತ್ತಾರೆ. ಅದರಿಂದ ಪೂಜ್ಯ ಉದ್ದಾನಶಿವಯೋಗಿಗಳು ಅಟವೀಶ್ವರರ ಗದ್ದುಗೆಯನ್ನು ಮಠದ ಪ್ರಾಂಗಣದಲ್ಲಿ ಕಟ್ಟಿಸಿದರು.

ಹೀಗೆ ಶ್ರೀಮದಟವೀಶ್ವರ ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಕೆಲವು ಕಾಲ ನೆಲೆಯಾಗಿ ನಿಂತು ಅನ್ನದಾನ ವಿದ್ಯಾದಾನ ಅಭಯದಾನಗಳೆಂಬ ತ್ರಿವಿಧ ದಾಸೋಹ, ಜಾತ್ರೋತ್ಸವ, ಗುರುಪರಂಪರೆಯ ಬಳಿವಿಡಿದು ಬಂದವರಿಗೆ ಮಠಾಧೀಶತ್ವ ಮುಂತಾದ ಶ್ರೀಮಠದ ನಡವಳಿಕೆಗಳಿಗೆ ನಾಂದಿಹಾಡಿ ಯಾವತ್ತೂ ಸಿದ್ಧಗಂಗೆಯ ಕೀರ್ತಿಯು ಉತ್ತರೋತ್ತರ ಉತ್ತುಂಗವಾಗಿ ಬೆಳಗಲು ಕಾರಣಕರ್ತೃಗಳಾಗಿದ್ದಾರೆ.

'ಅಡವೀಯೊಡೆಯನೆಂಬ ನಾಮ<br>
ಒಡೆದು ಮೆರೆವ ದೇವ ನಿಮ್ಮ<br>
ಬಿಡದೆ ನಂಬಿಕೊಂಬೆನ್ನೆ ಓ ಗುರುವರೇಣ್ಯಾ<br>
ಬಡವನೆನ್ನಾ ಕರವ ಬಿಡದಿರೈ ॥ (-ಅ. ಚರಿತ್ರೆ)

## ಶ್ರೀವಾಣಿ

ಕಾಯಕದಿಂದ ತನು ಶುಚಿಯಾಗುತ್ತದೆ. ಅನಗತ್ಯವಾಗಿ ಸಂಗ್ರಹವಾದ ನಂಜೆಲ್ಲವೂ ಬೆವರಿನ ರೂಪದಲ್ಲಿ ಹರಿದು ಹೋಗುತ್ತದೆ. ಬೊಜ್ಜು ಕರಗುತ್ತದೆ. ತನು ಸಪೂರವಾಗುತ್ತದೆ. ಸುಂದರ ಸಿರಿಯಾಗುತ್ತದೆ. ಕಾಯಕದಿಂದ ಮನ ಶುದ್ಧವಾಗುತ್ತದೆ. ಲೋಭ ಪ್ರಲೋಭನೆಗಳು ದೂರವಾಗುತ್ತವೆ. ಭಾವ ಶಿವಮುಖವಾಗುತ್ತದೆ.

## ಶರಣು ಶರಣಾರ್ಥಿ



ಕೆಂಗಾವಿ ಕಪನಿಯ ಮೈತುಂಬ ಹೊದ್ದ<br>
ಅಂಗವೇಭಸ್ಮ ಭಸ್ಮವೇ ಅಂಗವಾಗಿರುವ<br>
ಬಾಗಿದ ತಲೆಯ ಮುಗಿದ ಕೈಯ್ಯಾಗಿರಿಸೆಂಬ<br>
ಅಣ್ಣ ಬಸವಣ್ಣ ನುಡಿಯ ಜೀವನದಿ ನಡೆದ<br>
ಏನದ್ಭುತವದು ಸಮಾಜೋಧಾರ್ಮಿಕ,<br>
ದಾಸೋಹ, ಶೈಕ್ಷಣಿಕ ಕ್ರಾಂತಿ<br>
ಮಾಡಲಾದೀತೆ ಜಾತಿ ಡೊಂಬರಗದುಭ್ರಾಂತಿ<br>
ಬಹುದೂರ ಪ್ರಶಸ್ತಿ, ಪುರಸ್ಕಾರಗಳವರೆಗೆ<br>
ಶಿವಮೆಚ್ಚಿ ಹೌಹೌದೆನ್ನುವ ಶಿವಬಾಳ್ವೆ ನಿಜವೆಂದ<br>
ಇಂಥವರ ಬಾಳಿಗೆ ನೂರನ್ನೊಂದು ದಾಟಿದರೂ<br>
ಇನ್ನುಷ್ವಕಾಲ ಇರಲೆಂದು ಸ್ಮರಿಸೋಣ<br>
ಸಾರ್ಥಕದ ಬಾಳಿನ ಬಾಳೆಯಂದದಿ ಬಾಗಿ<br>
ಹಣ್ಣಾದ ಅಂಗ, ಅದು ಕೇವಲ ಅಂಗವಲ್ಲ ಕಣಾ,<br>
ಅದು ಸುಳಿದಾಡುವ ಜಂಗಮ ಲಿಂಗ<br>
ಶರಣು ಶರಣಾರ್ಥಿ ದೀನದಲಿತರಿಗೆ ಕಣ್ಣಾದ<br>
ಮುಕ್ಕಣ್ಣ ಸಿದ್ಧಗಂಗಾ ಪತಿ - ಶಿವಕುಮಾರಾರ್ಯಾ<br>
ಪೂಜ್ಯ ತಂದೆಯು ನೀವೆ, ತಾಯಿಯೂ ನೀವೆ,<br>
ಬಂಧು ಬಳಗವೆಲ್ಲವು ನೀವೆ ನಂಬಿದವರಿಗೆಂದೂ.

- ನಾ.ಮ. ಮರುಳಾರಾಧ್ಯ ನಾಗರಾಳು<br>
ನಂ. ೨/೩೭೩-೨, ವೆಂಕಟೇಶ್ವರ ದೇವಸ್ಥಾನದ ಹತ್ತಿರ<br>
ತಿರುಮಲನಗರ, ಆಧೋನಿ-೫೧೮೩೦೧<br>
ಕರ್ನೂಲ್ ಜಿಲ್ಲೆ, ಆಂಧ್ರ ಪ್ರದೇಶ

ಸ್ಮರಣೆ

## ಬೆಳಗಿನೊಳಗಣ ಮಹಾಬೆಳಗು

# ಶ್ರೀ ಉದ್ದಾನ ಶಿವಯೋಗಿಗಳು

– ಪ್ರೊ. ಹೆಚ್.ವಿ. ವೀರಭದ್ರಯ್ಯ *



ಶ್ರೀ ಉದ್ದಾನ ಶಿವಯೋಗಿಗಳ ಪೂರ್ವಾಶ್ರಮದ ಹೆಸರು ರುದ್ರಪ್ಪನೆಂದು. ಬೆಂಗಳೂರು ಜಿಲ್ಲೆ ನೆಲಮಂಗಲ ತಾಲ್ಲೂಕು ಲಕ್ಕೂರು ಪುಣ್ಯಗ್ರಾಮ ರುದ್ರಪ್ಪನವರಿಗೆ ಜನ್ಮಕೊಟ್ಟ ಸ್ಥಳ. ೧೮೬೦ ರಲ್ಲಿ ಪಟೇಲ್ ಗಟ್ಟಿಪ್ಪ ಮತ್ತು ಮರುಳಸಿದ್ಧಮ್ಮನವರ ಶಿವಲಿಂಗ ಪುಷ್ಪವಾಗಿ ಅರಳಿದ ಮಗು ರುದ್ರಪ್ಪ. ಐದು ಜನ ಅಣ್ಣಂದಿರು, ನಾಲ್ಕು ಜನ ಸೋದರಿಯರ ತುಂಬು ಕುಟುಂಬದಲ್ಲಿ ಕಣ್ಣರಳಿಸಿದ ಪುಣ್ಯದ ಮೊಗ್ಗು. ದಾಸೋಹಕ್ಕೆ ಹೆಸರಾದ ಮನೆತನ. ಗುರು-ಲಿಂಗ-ಜಂಗಮ ಭಕ್ತಿಯ ಬೀಡು. ರುದ್ರಪ್ಪ ಬೆಳೆದಂತೆ ಸಿರಿಸಂಪತ್ತು ಹೆಚ್ಚುತ್ತ ಬಂದಿತು. ಕಾಯಕದ ಕಾರುಣ್ಯ ಕಂದನಾಗಿ ಕುರಿ-ಮೇಕೆಗಳ ಆರೈಕೆಯಲ್ಲಿ ಅರಳುತ್ತ ರುದ್ರಪ್ಪ ಸಿದ್ಧನ 'ಬೆಟ್ಟದ ಜೀವ'ವಾಗಿ ಬೆಳೆದದ್ದು ಭವಿಷ್ಯದ ಬಾಗಿಲು ತೆಗೆಯುವಂತಾಯಿತು. ರುದ್ರಪ್ಪ ಓದಿದ್ದು ಕಡಿಮೆ. ಅರಿತದ್ದು ಜಾಸ್ತಿ. ದೊಡ್ಡ ದರ್ಶನವನ್ನು ತನ್ನ ಭವ್ಯತನುವಿನಲ್ಲಿಟ್ಟುಕೊಂಡೇ ಹುಟ್ಟಿಬಂದಿದ್ದ ರುದ್ರಪ್ಪ ಯೋಗಿಗಳ, ಸಿದ್ಧರ ಸಾನ್ನಿಧ್ಯದಲ್ಲಿ ಸಿದ್ಧನಬೆಟ್ಟದ ಅಂತರಂಗದಾವರಣದಲ್ಲಿ ಬೆಳೆಯುತ್ತ ಬಂದ. ಜೀವನದಲ್ಲಿ ಅದೂ ಮಹಾತ್ಮರ ಜೀವನದಲ್ಲಿ ಮಹಾತಿರುವುಗಳು ಉಂಟಾಗುತ್ತವೆ. ಅಂತೆಯೇ ರುದ್ರಪ್ಪನ ಜೀವನದಲ್ಲಿಯೂ ಉಂಟಾದ ತಿರುವು ಲೋಕಕಲ್ಯಾಣಕ್ಕೆ ತೆರೆದ ಮುತ್ತಿನ ಬಾಗಿಲಾಯಿತು. ಸಾಧಕನ ಹಾದಿಯಲ್ಲಿ ಕಂಡುಬಂದ ಸಾಧನೆಯ ಸೋಪಾನವೆನಿಸಿತು. ತನ್ನ ಮನೆಯ ಮೇಕೆಯೊಂದನ್ನು ಮಾರಿದ್ದಕ್ಕಾಗಿ ಮನೆಯವರ ಕೋಪಕ್ಕೆ ಕಾರಣವಾಗಿ, ಮನೆಬಿಟ್ಟು ಸಿದ್ಧಗಂಗೆಗೆ ಬಂದ ರುದ್ರಪ್ಪ ಅಲ್ಲಿನ ಸೇವಾಮೂರ್ತಿಯಾದ ಪರಮ ತಪಸ್ವಿ ಶ್ರೀ ಅಟವೀ ಸ್ವಾಮಿಗಳ ಯೌಗಿಕ ಕಣ್ಣಿಗೆ ತಂಪುತಂದ ತೇಜಸ್ವಿ ತರುಣ ತರಣಿಯಾದ. ನಿಧಿ ನಿಧಾನವ ಕಂಡಷ್ಟು ಅಟವೀಸ್ವಾಮಿಗಳಿಗೆ ಆನಂದವಾಯಿತು. ಅನಿಮಿಷ – ಅಲ್ಲಮಪ್ರಭುಗಳಂತೆ, ರಾಮಕೃಷ್ಣ-ವಿವೇಕಾನಂದರಂತೆ, ಗುರು-ಶಿಷ್ಯರ ಮಹಾಸಂಗಮವಾಯಿತು.

ಗುರು ಕಾರುಣ್ಯದಂಗಳದಲ್ಲಿ ರುದ್ರಪ್ಪ ಶ್ರೀ ಉದ್ದಾನ ಸ್ವಾಮಿಯಾಗಿ ಬೆಳೆದ. ಗುರುವೇ ಹುಬ್ಬೇರಿಸುವಂತೆ ನಿಬ್ಬೆರಗಾಗುವಂತೆ, ಇಹ-ಪರಗಳೆರಡನ್ನೂ ಗೆಲ್ಲುವ ಮಹಾಮಹಿಮನಾಗಿ ಬೆಳೆದ. ಕಾಯಕ-ದಾಸೋಹಗಳ ರಹಸ್ಯವನ್ನು ಅರಿತು ಅಡಿಯಿರಿಸಿದ. ಸಿದ್ಧಗಂಗೆಗೆ ಸಹಸ್ರ ತೋಳಬಲತಂದ ಭೀಮ ಸಾಹಸಿಯೆನಿಸಿದ. ಶ್ರೀಮಠದ ದಾಸೋಹದಲ್ಲಿ ಕರಗಿ ಕನಕನಾದ. ಪ್ರಾಂತದರ್ಶಿಯಾಗಿ ಬೆಳೆದುನಿಂದ. ಲೋಕದ ಕಣ್ಣಿನಲ್ಲಿ ಪವಾಡ ಪುರುಷನಾಗಿ ಕಂಗೊಳಿಸಿದ. ಶ್ರೀಕ್ಷೇತ್ರಕ್ಕೆ ತನ್ನ ದಣಿವರಿಯದ ದುಡಿಮೆಯಿಂದ ಹೊಸ ಆಯಾಮವನ್ನೇ ನಿರ್ಮಾಣ ಮಾಡಿದ ನಿರಂಜನ ಪ್ರಭೆಯಾದ. ಅಟವೀ ಸ್ವಾಮಿಗಳು ತಾವು ಕನಸಿನ ಲೋಕೋಪಕಾರಕ ಕಲ್ಯಾಣ ಕಾರ್ಯಗಳೆಲ್ಲ ನಿರ್ಬಾಧಿತವಾಗಿ ಮುಂದುವರಿಸಿಕೊಂಡು ಹೋಗುವ ಸಾಮರ್ಥ್ಯವನ್ನು ಉದ್ದಾನಪ್ಪನವರಲ್ಲಿ ಕಂಡರು. ಅವರನ್ನೇ ಶ್ರೀಮಠದ ಮುಂದಿನ ಕ್ಷೇತ್ರಾಧಿಪತಿಗಳೆಂದು ತೀರ್ಮಾನಿಸಿ 'ಉದ್ದಾನ ಶಿವಯೋಗಿ' ಎಂಬ ನೂತನ ಅಭಿಧಾನದಿಂದ ನೇಮಿಸಿ ಅಧಿಕಾರ ವಹಿಸಿಕೊಟ್ಟರು.

* ಸಂಪಾದಕರು, ಸಿದ್ಧಗಂಗಾ ಮಾಸಪತ್ರಿಕೆ, ಸಿದ್ಧಗಂಗಾ ಮಠ



ಅದೊಂದು ಪುಣ್ಯದ ಘಳಿಗೆ. ಕಾಲ-ದೇಶಗಳು ಮಾಡಿದ ತಪಸ್ಸಿನ ಫಲ. ಶ್ರೀಮಠದ ಶ್ರೇಯೋಭಿವೃದ್ಧಿಗೆ ಕಾರಣಪುರುಷನ ಆಗಮನವಾದ ಅಮೃತ ಮುಹೂರ್ತ. ಗುರು ಅನುಗ್ರಹಿಸಿ ಶಿಷ್ಯನ ವ್ಯಕ್ತಿತ್ವ ವಿಕಾಸದ ಭವ್ಯದಿವ್ಯದಲ್ಲಿ ತನ್ನನ್ನು ಕಂಡುಕೊಂಡು ಧನ್ಯವಾಯಿತು. ಅಟವೀಸ್ವಾಮಿಗಳು ಚಿಕ್ಕತೊಟ್ಲು ಕೆರೆಯಲ್ಲಿ ನಿಜಗದ್ದುಗೆಯಲ್ಲಿ ಯೋಗನಿದ್ರೆಯಲ್ಲಿ ನಿರತರಾದರು. ೧೯೧೧ ರಲ್ಲಿ ಶ್ರೀ ಉದ್ದಾನ ಸ್ವಾಮಿಗಳು ಶ್ರೀಮಠ ಸಿದ್ಧಗಂಗೆಯಲ್ಲಿ ಗುರುಗಳ ಸ್ಮರಣೆಯಲ್ಲಿ ಮುಂದುವರಿದರು. ತಮ್ಮ ಗುರು ಅಟವೀಸ್ವಾಮಿಗಳ ಗದ್ದುಗೆಯನ್ನು ಮಠದಲ್ಲಿ ಕಟ್ಟಿಸಿದರು.

ಪ್ರಬಲ ಸಂಕಲ್ಪ ಶಕ್ತಿಯ ಶ್ರೀ ಉದ್ದಾನ ಸ್ವಾಮಿಗಳು ಮಠದ ಸೇವಾಕಾರ್ಯಗಳನ್ನು ವಿಸ್ತರಿಸುತ್ತ ಬಂದರು. ಜೋಳಿಗೆಯ ಶುದ್ಧಕಾಯಕ ಮುಂದುವರಿಸಿದರು. ತಾವು ಓದಿದ್ದು ಕಡಿಮೆಯಾದರೂ, ಲೋಕವನ್ನು ಓದಲು ಶ್ರೀಗಳು ವಹಿಸಿದ ಮುತುವರ್ಜಿ ಅಪಾರ. ಸಂಸ್ಕೃತಾಭ್ಯಾಸ ಕೇವಲ ಒಂದು ವರ್ಗಕ್ಕೆ ಸೀಮಿತವಾಗಿದ್ದ ದಿನಮಾನಗಳಲ್ಲಿ ದಿಟ್ಟವಾಗಿ ಎಲ್ಲರೂ ಸಂಸ್ಕೃತ ಕಲಿಯುವಂತೆ ೧೯೧೭ ರಲ್ಲಿಯೇ ಪಾಠಶಾಲೆ ತೆರೆದರು. ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯನ್ನು ೧೯೦೮ ರಷ್ಟು ಹಿಂದೆಯೇ ಪ್ರಾರಂಭಿಸಿದರು. ಜಾತ್ರಾರ್ಥಿಗಳಿಗೆಲ್ಲಾ ದಾಸೋಹ ಪ್ರಾರಂಭಿಸಿದರು. ಶ್ರೀಮಠವನ್ನು ದೊಡ್ಡ ನ್ಯಾಯಾಲಯವನ್ನಾಗಿ ಕಟ್ಟಿ ಬೆಳೆಸಿದರು. 'ಮಠವೆಂಬುದು ಘಟದಿಂದ' ಎಂಬುದನ್ನು ಪ್ರತ್ಯಕ್ಷ ಮಾಡಿ ತೋರಿಸುತ್ತ ನಡೆದರು. ನವರಾತ್ರಿ ಉತ್ಸವ ಪ್ರಾರಂಭಿಸಿದರು. ವಿದ್ಯಾರ್ಥಿ ನಿಲಯ ತೆರೆದರು. ಜಾತಿ-ಮತ-ಕೋಮುಗಳನ್ನು ನೋಡಲಿಲ್ಲ. ಜ್ಞಾನದಾಹಿಯಾಗಿ ಬಂದ ಮನಸ್ಸನ್ನು ಮಾತ್ರ ಪುರಸ್ಕರಿಸಿದರು.

ಶ್ರೀ ಉದ್ದಾನ ಶಿವಯೋಗಿಗಳು **'ವಜ್ರಾದಪಿ ಕಠೋರಾಣಿ, ಮೃದೂನಿ ಕುಸುಮಾದಪಿ'** ಕಾಯಕ ಸದ್ಭಾವಿಗಳು. ಶಿವಯೋಗ ಸಾಧನೆಯ ಶಿವಕಳಸ ವಾದವರು. ತಮ್ಮ ಉತ್ತರಾಧಿಕಾರಿಯಾಗಿ "ಮರುಳಾರಾಧ್ಯ"ರನ್ನು ಆಯ್ಕೆ ಮಾಡಿಕೊಂಡರು. ಶಿವನಿಚ್ಛೆ ಬೇರೆ ಇತ್ತೆಂದು ಕಾಣುತ್ತದೆ. ಅವರು ಅಲ್ಪ ಕಾಲದಲ್ಲಿಯೇ ಶಿವನೊಳೊಂದಾದರು. ಪೂಜ್ಯ ಮರುಳಾರಾಧ್ಯರ ಸ್ನೇಹ ಸೌಭಾಗ್ಯವಾಗಿದ್ದ "ಶಿವಣ್ಣ"ನವರು ಸಿದ್ಧಗಂಗೆಯ ಸಾಣೆ ಶ್ರೀಗಂಧಕ್ಕೆ ಬರುವ ಶುಭಘಳಿಗೆ ಕಾದಿತ್ತು. ಶ್ರೀ ಉದ್ದಾನ ಶಿವಯೋಗಿಗಳು ಶಿವಣ್ಣನವರನ್ನು ಶ್ರೀಮಠದ ಉತ್ತರಾಧಿಕಾರಿಗಳನ್ನಾಗಿ ದಿನಾಂಕ ೩.೩.೧೯೩೦ ರಂದು "ಶ್ರೀ ಶಿವಕುಮಾರಸ್ವಾಮಿ"ಗಳೆಂದು ಅಭಿಧಾನವಿತ್ತು ಆಶ್ರಯ ನೀಡಿ ಸಂಸ್ಥೆಯ ಸೇವಾವ್ರತವನ್ನು ಆಶೀರ್ವದಿಸಿದರು. ಅಂದಿನಿಂದ ಸುಮಾರು ಹನ್ನೊಂದು ವರ್ಷ ಗುರು ಶಿಶುವನ್ನು ಎಚ್ಚರದ ಕಣ್ಣಿನಲ್ಲಿ ಆರೈಕೆ ಮಾಡಿ ೧೧.೧.೧೯೪೧ ರಂದು ಲಿಂಗದೊಳಗಾಗುವ ಮುನ್ನ ಶಿಷ್ಯಮಂಗಳವನ್ನು ಸಂಪೂರ್ಣ ದೃಷ್ಟಿಯಿಟ್ಟು ಹರಸಿ ಲಿಂಗದೊಳಗಾದರು. ಬೆಳಗಿನೊಳಗಣ ಮಹಾಬೆಳಗಾಗಿ ಹೋದರು. ಲೋಕಕ್ಕೆ, ಸಮಾಜಕ್ಕೆ ಮಹಾನಿಧಿಯನ್ನು ಕೊಟ್ಟುಹೋದರು. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥ ಅದ್ಭುತ ಚೇತನವನ್ನು, ಸೇವಾಜ್ಯೋತಿಯನ್ನು ಮುಡಿಸಿದರು.

### ಶ್ರೀವಾಣಿ

ವಿಜ್ಞಾನದ ಮೂಲಕ ಮನುಷ್ಯ ಜಗತ್ತಿಗೆ ಹೊಸರೂಪವನ್ನೇ ಕೊಡುತ್ತಿದ್ದಾನೆ. ಆದರೆ ಮಾನವ ಅದರ ದುರುಪಯೋಗದಿಂದ ಶಾಂತಿಯನ್ನೇ ಕಳೆಯುತ್ತಿದ್ದಾನೆ. ವಿಜ್ಞಾನವನ್ನು ಸಂತೋಷಮುಖಿಯನ್ನಾಗಿ, ಆತ್ಮವಿಕಾಸ ಮೂರ್ತಿಯಾಗಿ, ಮಾನವೀಯತೆಯ ಮುಖಿಯಾಗಿ ಬಳಸಿಕೊಳ್ಳುವುದಾಗಬೇಕು.

* * *

'ನಿಷ್ಠೆ' ಎಲ್ಲದರ ಯಶಸ್ಸಿಗೆ ಕಾರಣ. ಆದರೆ ಇಂದು ನಿಷ್ಠೆಯಿಲ್ಲದವರೇ ಎಲ್ಲೆಲ್ಲೂ ಕಾಣುತ್ತಿದ್ದಾರೆ. ತತ್ತ್ವನಿಷ್ಠೆಯಿಲ್ಲ, ದೇಶನಿಷ್ಠೆಯಿಲ್ಲ, ಕರ್ತವ್ಯ ನಿಷ್ಠೆಯಿಲ್ಲ, ಸ್ಥಾನ ನಿಷ್ಠೆಯಿಲ್ಲ. ರಾಜಕೀಯದಲ್ಲಂತೂ ನಿಷ್ಠೆಯ ಮಾರಾಟವೇ ನಡೆದಿದೆ. ನಿಷ್ಠೆ ಪಾಲನೆಯಲ್ಲಿ ಸ್ವಾಮಿಗಳಾದವರೂ ಎಡವುತ್ತಿದ್ದಾರೆ. ಹೀಗಾಗ ಬಾರದು.

* * *

ಕಾಯಕದಲ್ಲಿ ಮೇಲು ಕೀಳು ಎಂಬ ಭೇದಭಾವ ಇರಲಾರದು. ಕಾಯಕ ಜೀವನ ದೇವರ ಪೂಜೆಯಷ್ಟೆ ಪವಿತ್ರ. ಅನ್ಯರ ಸಂಪತ್ತು ಕಸಕ್ಕೆ ಸಮಾನ ಎಂಬ ಶರಣರ ದೃಷ್ಟಿಬೇಕು. ಬಸವಣ್ಣನವರ ಕಾಯಕ ತತ್ತ್ವಾಚರಣೆಯಿಂದ ಕಲ್ಯಾಣರಾಜ್ಯ ನಿರ್ಮಾಣ ವಾಗಿತ್ತು. ಅದು ಮತ್ತೆ ಬರಬೇಕು.

ಅಭಿನಂದನೆ

# ಪ್ರೊ. ಕೆ.ಜಿ. ನಾಗರಾಜಪ್ಪ ಅವರ 'ಅನುಶ್ರೇಣಿ-ಯಜಮಾನಿಕೆ' ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ

ಸ್ನೇಹಜೀವಿ, ಖಂಡಿತವಾದಿ, ಹೋರಾಟಗಾರ, ಒಂಟಿಸಲಗ ಎಂದೆಲ್ಲ ಲೋಕದ ಕಣ್ಣಿಗೆ ಕಾಣಿಸಿಕೊಂಡಿರುವ ಪ್ರೊ. ಕೆ.ಜಿ. ನಾಗರಾಜಪ್ಪನವರ **'ಅನುಶ್ರೇಣಿ ಯಾಜಮಾನಿಕೆ'** ಕೃತಿಗೆ ೨೦೧೮–೧೯ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿರುವುದಕ್ಕೆ 'ಸಿದ್ಧಗಂಗಾ' ಹೃದಯಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಮಿಗಳವರಿಂದ ಪ್ರೊ. ಕೆ.ಜಿ. ನಾಗರಾಜಪ್ಪ ಅವರಿಗೆ ಸಿದ್ಧಗಂಗ ಶಿವಕುಮಾರಶ್ರೀ ಪ್ರಶಸ್ತಿ ಪ್ರದಾನ

ಜನವರಿ ೯, ೧೯೩೬ ರಂದು ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ ಕಲ್ಲೂರು ಗ್ರಾಮದಲ್ಲಿ ಶ್ರೀ ಮೇಸ್ತ್ರಿ ಸಂಗಪ್ಪ ಮತ್ತು ಶ್ರೀಮತಿ ಲಕ್ಷ್ಮಮ್ಮ ದಂಪತಿಗಳ ಸುಪುತ್ರರಾಗಿ ಜನಿಸಿದರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಕಡಬದಲ್ಲಿ, ೧೯೫೨ ರಲ್ಲಿ ಶ್ರೀ ಸಿದ್ಧಗಂಗಾ ಮಠದಲ್ಲಿ ಆಶ್ರಯ ಪಡೆದು ತುಮಕೂರಿನಲ್ಲಿ ಕಾಲೇಜು ವ್ಯಾಸಂಗವನ್ನೂ, ಮೈಸೂರಿನಲ್ಲಿ ಕನ್ನಡ ಸ್ನಾತಕೋತ್ತರ ಪದವಿಯನ್ನು ಪಡೆದರು. ೧೯೬೦ ರಲ್ಲಿ ಕೆ.ಆರ್.ಎಸ್. ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿ ವೃತ್ತಿಜೀವನ್ನು ಆರಂಭಿಸಿ, ನಂತರ ಮೈಸೂರಿನ ಪದವಿಪೂರ್ವ ಕಾಲೇಜಿನಲ್ಲಿ, ೧೯೬೫ ರಲ್ಲಿ ಶ್ರೀಮಠದ ಪದವಿಪೂರ್ವ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಶ್ರೀ ಕೆ.ಜಿ. ನಾಗರಾಜಪ್ಪನವರು ೧೯೬೬ ರಲ್ಲಿ ತುಮಕೂರಿನಲ್ಲಿ ಪ್ರಾರಂಭವಾದ ಸಿದ್ಧಗಂಗಾ ಕಾಲೇಜಿನಲ್ಲಿ ಉಪನ್ಯಾಸಕರಾಗಿ, ಸಹ ಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ೧೯೯೭ ರಲ್ಲಿ ನಿವೃತ್ತರಾದರು. ಆನಂತರವೂ ಅತಿಥಿ ಪ್ರಾಧ್ಯಾಪಕರಾಗಿ, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಚನ್ನಪಟ್ಟಣದ ಶ್ರೀ ಕುವೆಂಪು ಸ್ನಾತಕೋತ್ತರ ಕೇಂದ್ರ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದ ಹಿರಿಮೆ ಅವರದು.

ಪ್ರೊ. ಕೆ.ಜಿ. ನಾಗರಾಜಪ್ಪನವರು ದೊಡ್ಡ ಸಂಕಣ್ಣನಾಯಕ, ದೇವಾಂಗ ಸಂಸ್ಕೃತಿ ಒಂದು ಅಧ್ಯಯನ, ಮರುಚಿಂತನೆ, ಭಕ್ತಿ ಸಾಹಿತ್ಯದಲ್ಲಿ ಪ್ರತಿಭಟನೆಯ ವಿಧಾನಗಳು, ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಹಿಂಸೆಯ ಅಭಿವ್ಯಕ್ತಿ ಸ್ವರೂಪ, ಇಕ್ಕಟ್ಟು–ಬಿಕ್ಕಟ್ಟು, ಸಾಹಿತ್ಯ ಸ್ವತಂತ್ರ ಕೃತಿಗಳು, ಶಿವಕುಮಾರವಾಣಿ, ವೀರಕುಮಾರ, ಸಂಗ್ರಾಮ, ಶ್ರೀ ಜಚನಿ ಸಾಹಿತ್ಯ ಸಮ್ಮಿಶ್ರ, ಶ್ರೀ ಜಚನಿ ಸಾಹಿತ್ಯ ಕೈವಲ್ಯ ಪದ್ಧತಿ ಪ್ರದೀಪಿಕೆ ಸಂಪಾದಿತ ಕೃತಿಗಳು. ರಹಸ್ಯ ಪಂಥಗಳು, ತಮಿಳು ಶೈವ ಮತ್ತು ಹರಿಹರ, ಜಿ.ಎಸ್.ಎಸ್. ಸಾಹಿತ್ಯದ ವೈಚಾರಿಕ ನೆಲೆಗಳು, ಶಾಸ್ತ್ರ ಸಂಪ್ರದಾಯ ಮತ್ತು ಅಲ್ಲಮಪ್ರಭು ಮೊದಲಾದ ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ.

ಶ್ರೀಯುತರು ಸಾಹಿತ್ಯ ಕ್ಷೇತ್ರಕ್ಕೆ ಸಲ್ಲಿಸಿದ ಅಮೂಲ್ಯ ಸೇವೆಗಾಗಿ ಅನೇಕ ಪ್ರಶಸ್ತಿ, ಪುರಸ್ಕಾರಗಳು ಲಭಿಸಿವೆ. ಅವುಗಳಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಹಂಪಿ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಗುಬ್ಬಿ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ, ಶ್ರೀ ಸಿದ್ಧಗಂಗಾ ಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದಿಂದ ಕೊಡಮಾಡುವ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರತಿಷ್ಠಿತ ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಪ್ರೊ. ಕೆ.ಜಿ. ನಾಗರಾಜಪ್ಪನವರು ಲೇಖನಿಯಿಂದ ಮತ್ತಷ್ಟು ಮೌಲಿಕ ಕೃತಿಗಳು ಲೋಕಾರ್ಪಣೆಯಾಗಲಿ ಎಂದು ಸಿದ್ಧಗಂಗಾ ಶುಭ ಹಾರೈಸುತ್ತದೆ.



ಸಾಂದರ್ಭಿಕ

# ಶ್ರೀ ದೇಗುಲಮಠದ ಅಭಿವೃದ್ಧಿಗೆ ನಾಂದಿ ಹಾಡಿದ ಪರಮಪೂಜ್ಯ ಲಿಂ. ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು

– ಎಚ್.ಎಸ್. ಸಿದ್ಧಗಂಗಪ್ಪ *



ಕನಕಪುರ ಶ್ರೀ ದೇಗುಲಮಠ ಸುಮಾರು ಏಳುನೂರು ವರ್ಷಗಳ ಭವ್ಯ ಇತಿಹಾಸ, ಪರಂಪರೆಯುಳ್ಳ, ಪ್ರಸಿದ್ಧವಾದ ವೀರಶೈವ-ಲಿಂಗಾಯತ ಮಠಗಳಲ್ಲಿ ಒಂದು ಎಂದು ಹೇಳಲು ಅಭಿಮಾನವೆನಿಸುತ್ತದೆ. ಶ್ರೀ ಆದ್ಯ ನಿರ್ವಾಣ ಮಹಾಸ್ವಾಮಿಗಳವರಿಂದ ಪ್ರಾರಂಭವಾದ ಈ ಮಠದಲ್ಲಿ ಲಭ್ಯವಿರುವ ಮಾಹಿತಿಯ ಪ್ರಕಾರ ಹದಿನಾಲ್ಕು ಜನ ಗುರುಗಳು ಶ್ರೀಮಠದ ಅಭಿವೃದ್ಧಿಯ ಕಟ್ಟಡಕ್ಕೆ ತಪಸ್ಸಕ್ತಿಯಿಂದ ತಯಾರಾದ ಇಟ್ಟಿಗೆಗಳನ್ನಿಟ್ಟು ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ. ಇವರಲ್ಲಿ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳು ಶ್ರೀಮಠದ ಅಭಿವೃದ್ಧಿ ಚಟುವಟಿಕೆಗಳಿಗೆ ಚಾಲನೆ ನೀಡಿದ ಮಹಾನ ತಪಸ್ವಿಗಳು. ಇವರು ಪ್ರೀತಿ, ವಾತ್ಸಲ್ಯ, ಕರುಣೆಯ ಕಡಲಾಗಿದ್ದರು. ಮಾತೃ ಸ್ವರೂಪಿಯಾಗಿದ್ದರು. ನೊಂದವರ ಕಣ್ಣೀರನ್ನೊರಸುವ ಕಾರುಣ್ಯ ಸ್ವರೂಪಿಯಾಗಿದ್ದರು. ಕಾವಿಗೆ ಘನತೆ, ಗೌರವ, ಮಹತ್ವವನ್ನು ತಂದುಕೊಟ್ಟ ವೈರಾಗ್ಯಮೂರ್ತಿಗಳಾಗಿದ್ದರು. ಶ್ರೀ ದೇಗುಲಮಠವೆಂಬ ಪುಣ್ಯ ತಾಣದಲ್ಲಿ ಮಾನವೀಯತೆಯ ಮೌಲ್ಯಗಳ ಬೀಜವನ್ನು ಬಿತ್ತಿ ಹೆಮ್ಮರವಾಗಿ ಬೆಳೆಯುವಂತೆ ಮಾಡಿದ ಘನಮಹಿಮರು. ಬಸವಾದಿ ಶರಣರ ಆದರ್ಶಗಳನ್ನು ಸಾಕಾರಗೊಳಿಸಿದ ಮಹಾನುಭಾವರು.

ಅರವತ್ಮೂರು ವರ್ಷಗಳ ಸುದೀರ್ಘ ಕಾಲ ಶ್ರೀಮಠದ ಪೀಠಾಧಿಪತಿಗಳಾಗಿ ಶ್ರೀಮಠದ ಕೀರ್ತಿ ದಶದಿಕ್ಕುಗಳಿಗೂ ಹರಡುವಂತೆ ಮಾಡಿದ ಕಾರುಣ್ಯಮೂರ್ತಿಗಳು, ಜೀವದಯಾಪರರಾಗಿದ್ದ ಶ್ರೀಗಳವರನ್ನು ಭಕ್ತರು, ಅಭಿಮಾನಿಗಳು ಅವರನ್ನು **'ದೇಗುಲ ಜ್ಯೋತಿ'** ಎಂದು ಕರೆದು ಗೌರವಿಸಿರುವುದು ಔಚಿತ್ಯ ಪೂರ್ಣವಾಗಿದೆ. ಅವರು 'ಸಮತೆಯೆಂಬ ಕಂತೆಯ ತೊಟ್ಟು, ಸುಬುದ್ಧಿಯೆಂಬ ಟೊಪ್ಪರವನ್ನಿಕ್ಕಿ' ಕಾರಣ ಮಾತ್ರದಿಂದ ಭೂಮಿಗೆ ಬಂದ ಪುಣ್ಯಪುರುಷರು. ಶಿವಯೋಗಾನುಷ್ಠಾನದಲ್ಲಿ ತಮ್ಮನ್ನೇ ತಾವು ಮೈಮರೆಯುತ್ತಿದ್ದ ಶಿವಯೋಗ ಸಂಪನ್ನರಾಗಿದ್ದರು. ಪೂಜ್ಯ ಶ್ರೀಗಳು ಆಚಾರ-ವಿಚಾರಗಳಿಗೆ, ಸರಳತೆ, ಔದಾರ್ಯಕ್ಕೆ ಒಂದು ಉಜ್ವಲ ನಿದರ್ಶನವಾಗಿದ್ದರು. ಅರಿಷಡ್ವರ್ಗಗಳನ್ನು ಗೆದ್ದು ಮಹಾಂತರಾಗಿದ್ದರು. ತಮ್ಮ ಮುಗ್ಧಮನಸ್ಸಿನಿಂದ ಭಕ್ತ ಸಮುದಾಯವನ್ನು ಅಯಸ್ಕಾಂತದಂತೆ ತಮ್ಮತ್ತ ಸೆಳೆಯುತ್ತಿದ್ದರು.

**ಜನನ-ಬಾಲ್ಯ :** ತಂದೆ ಶರಣ ಶ್ರೀ ಸಾವಂದಪ್ಪ, ತಾಯಿ ಶರಣೆ ಗೌರಮ್ಮ. ಇವರ ದಾಂಪತ್ಯ ಜೀವನದ ಫಲವಾಗಿ ೧೮೪೯ ರಲ್ಲಿ ಪುತ್ರರತ್ನ ಜನಿಸಿತು. ಹುಟ್ಟಿದ ಊರು ರಾಮನಗರಕ್ಕೆ ಹೊಂದಿದ್ದ ಐಜೂರು ಗ್ರಾಮ. ತಂದೆ ತಾಯಿಗಳು ಪ್ರೀತಿಯಿಂದ ಇಟ್ಟ ಹೆಸರು ಬಸಪ್ಪ ದೇವರೆಂದು. ಮುಂದೆ ಮಗ ಬಸವಣ್ಣನವರ ಆದರ್ಶಗಳನ್ನು ಮೈಗೂಡಿಸಿಕೊಂಡು ಸಮಾಜಕ್ಕೆ ಬೆಳಕು ನೀಡುವ ಆದರ್ಶ ವ್ಯಕ್ತಿಯಾಗಲಿ ಎಂಬ ಸದಾಶಯದಿಂದ ಬಸಪ್ಪ ದೇವರು ಎಂದು ಹೆಸರಿಟ್ಟಿರಬೇಕು! ತಂದೆ ತಾಯಿಗಳ ಆಶಯ ಹುಸಿಯಾಗಲಿಲ್ಲ. ಬಡತನ ಅವರನ್ನು ಹಿಂಬಾಲಿಸುತ್ತಾ ಬಂದರೂ ಧೈರ್ಯದಿಂದ ಕಾಯಕ ನಿಷ್ಠೆಯಿಂದ, ಶ್ರದ್ಧೆಯಿಂದ ಕೃಷಿ ಕಾಯಕದಲ್ಲಿ ತೊಡಗಿಸಿಕೊಂಡು ಬಡತನವನ್ನು ಹಿಮ್ಮೆಟ್ಟಿಸಿದರು. 'ಕೈ ಕೆಸರಾದರೆ ಬಾಯಿ ಮೊಸರು' ಎಂಬ ನಾಣ್ನುಡಿ ಅವರಿಗೆ ಸ್ಫೂರ್ತಿಯ ಸೆಲೆಯಾಯಿತು. ಬೆವರು ಸುರಿಸಿ ದುಡಿಯುವವರಿಗೆ, ನಂಬಿದವರಿಗೆ ಭೂತಾಯಿ ಎಂದೂ ಕೈಬಿಡುವುದಿಲ್ಲ ಎಂಬುದಕ್ಕೆ ಈ ಶರಣ ದಂಪತಿಗಳು ಒಂದು ಉತ್ತಮ ನಿದರ್ಶನ.

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೬೧

ಪ್ರಾಥಮಿಕ ಶಿಕ್ಷಣ ಐಜೂರಿನಲ್ಲಿ ನಡೆಯಿತು. 'ಬೆಳೆಯುವ ಸಸಿಯನ್ನು ಮೊಳಕೆಯಲ್ಲಿ ನೋಡು' ಎಂಬಂತೆ ಬಸಪ್ಪ ದೇವರು ಬಾಲ್ಯದಲ್ಲಿಯೇ ಗುರು-ಲಿಂಗ-ಜಂಗಮ ಸೇವೆಯನ್ನು ಶ್ರದ್ಧಾ ಭಕ್ತಿಯಿಂದ ಮಾಡುತ್ತಿದ್ದರು. ಮನೆಗೆ ಬಂದ ಜಂಗಮರ ಸೇವೆ, ಅತಿಥಿಗಳ ಸೇವೆ ಮಾಡುವುದೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ. ಅವರ ಮನೆಯಲ್ಲಿ ಬಹಳ ಕಾಲ ತಂಗಿದ್ದ ಶ್ರೀ ಸಿದ್ಧರಾಮ ಶಿವಯೋಗಿಗಳ ಸೇವೆಯನ್ನು ಶ್ರದ್ಧೆಯಿಂದ ಮಾಡುತ್ತಿದ್ದುದನ್ನು ಹತ್ತಿರದಿಂದ ಗಮನಿಸಿದ ಶ್ರೀ ಸಿದ್ಧರಾಮ ಸ್ವಾಮಿಗಳು ಬಸಪ್ಪದೇವರ ಸೇವಾಶಕ್ತಿ, ವಿನಯಾದಿ ವೈರಾಗ್ಯ ಗುಣಗಳನ್ನು ಮೆಚ್ಚಿ, ಸ್ವಲ್ಪಮಟ್ಟಿನ ಆಧ್ಯಾತ್ಮಿಕ ಶಿಕ್ಷಣವನ್ನು ಕೊಟ್ಟರು. ಬಾಲ್ಯದಲ್ಲಿ ದೊರೆತ ಆಧ್ಯಾತ್ಮಿಕ ಜ್ಞಾನದಿಂದ ಬಸಪ್ಪ ದೇವರು ವೈರಾಗ್ಯದತ್ತ ಮುಖ ಮಾಡಿದರು. ಅವರು ಬೆಳೆದಂತೆಲ್ಲಾ ಜ್ಞಾನ, ಭಕ್ತಿಗಳ ಮಹಾ ಸಂಗಮವೇ ಆದರು. ಅವರಿಗೆ ಲೌಕಿಕ ಜೀವನಕ್ಕಿಂತ ಅಲೌಕಿಕ ಜೀವನವೇ ಅವರಿಗೆ ಪ್ರಿಯವಾಗಿತ್ತು.

**ವಿರಕ್ತಾಶ್ರಮ ಸ್ವೀಕಾರ :** 'ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯ ಹೇಳಿದ್ದು ಹಾಲು ಅನ್ನ' ಎಂಬ ನಾಣ್ನುಡಿ ಬಸಪ್ಪನವರ ಪಾಲಿಗೆ ಸತ್ಯವಾಯಿತು. ಈ ದಿನಗಳಿಗೆ ಬಹಳ ವರ್ಷಗಳಿಂದ ಜಾತಕ ಪಕ್ಷಿಯಂತೆ ನಿರೀಕ್ಷೆ ಮಾಡುತ್ತಿದ್ದರು. ಒಳ್ಳೆಯ ಮನಸ್ಸಿನವರು ಬಯಸಿದ್ದನ್ನು ಶಿವ ನೆರವೇರಿಸುತ್ತಾನೆ ಎಂಬುದಕ್ಕೆ ಸಂನ್ಯಾಸಿಯಾಗುವ ಯೋಗ ಕೂಡಿಬಂದುದು ಶಿವಲೀಲೆ ! ಪೂರ್ವಜನ್ಮದ ಸುಕೃತ ಫಲವೂ ಹೌದು. ಶ್ರೀ ದೇಗುಲ ಮಠಾಧ್ಯಕ್ಷರಾಗಿದ್ದ ಪೂಜ್ಯ ಶ್ರೀ ಚನ್ನಬಸವ ಸ್ವಾಮಿಗಳು. ಶ್ರೀ ಬಸಪ್ಪನವರ ತಂದೆ ತಾಯಿಗಳ ಅನುಮತಿ ಪಡೆದು ೧೮೯೪ ರಲ್ಲಿ ಜಯನಾಮ ಸಂವತ್ಸರದ ಫಾಲ್ಗುಣ ಮಾಸದಲ್ಲಿ ಮಹೇಶ್ವರ ದೀಕ್ಷೆಕೊಟ್ಟರು. ಶ್ರೀಮಠದ ಭಕ್ತರು, ಅಭಿಮಾನಿಗಳು, ಹಿತೈಷಿಗಳು ಸೇರಿ ಚಿತ್ರದುರ್ಗದಲ್ಲಿ ಶ್ರೀ ನಿರಂಜನ ಜಗದ್ಗುರು ಶ್ರೀ ಜಯದೇವ ಮುರುಘ ರಾಜೇಂದ್ರ ಮಹಾಸ್ವಾಮಿಗಳವರ ಸಮ್ಮತಿ, ಆಶೀರ್ವಾದ ಪಡೆದು ಕ್ರಿ.ಶ. ೧೯೦೩ ರಲ್ಲಿ ಶೋಭಕ್ರತು ಸಂವತ್ಸರದ ಮಾಘಮಾಸದಲ್ಲಿ ನಿರಂಜನ ಪಟ್ಟಾಧಿಕಾರವನ್ನು ನೀಡಿ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳೆಂಬ ಅಭಿಧಾನ ನೀಡಲಾಯಿತು. ಈ ಅಭೂತಪೂರ್ವ ನಿರಂಜನ ಪಟ್ಟಾಧಿಕಾರ ಸಮಾರಂಭದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಭಾಗವಹಿಸಿದ್ದರು.

ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳ ಸರಳತೆ, ಸಜ್ಜನಿಕೆ, ವಿನಯವಂತಿಕೆ, ದಾಸೋಂಭಾವ, ಕರುಣೆ, ವಾತ್ಸಲ್ಯ ಇವುಗಳಿಂದ ಭಕ್ತರು ತಮ್ಮತ್ತ ಬರುವಂತೆ ಮಾಡಿದರು. ಪೂಜ್ಯ ಶ್ರೀಗಳು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿ ಗಳವರು ಕಾವಿಯ ಮಹತ್ವ ಹಾಗೂ ಮಠಾಧೀಶರ ಕರ್ತವ್ಯದ ಬಗ್ಗೆ ಶಿವನುಡಿಗಳಲ್ಲಿ ಹೇಳಿರುವುದನ್ನು ಅರ್ಥ ಮಾಡಿಕೊಂಡು ಜೀವನದಲ್ಲಿ ಅಳವಡಿಸಿಕೊಂಡು, ಜನರಲ್ಲಿ ಮನೆ ಮಾಡಿಕೊಂಡಿದ್ದ ಅಜ್ಞಾನ, ಮೂಢನಂಬಿಕೆ, ಕಂದಾಚಾರಗಳನ್ನು ಹೋಗಲಾಡಿಸಿ ಅರಿವಿನ ಜ್ಯೋತಿಯನ್ನು ಬೆಳಗುವಂತೆ ಮಾಡಲು ಪ್ರಾಮಾಣಿಕ ಪ್ರಯತ್ನ ಮಾಡಿದರು. ಬಸವಣ್ಣನವರು ಹೇಳಿದಂತೆ 'ಇವನಾರವ ಇವನಾರವ ಎನ್ನದೆ, ಇವನಮ್ಮವ ಇವನಮ್ಮನವ' ಎಂಬ ಮಾತನ್ನು ಮಠದಲ್ಲಿ ಅನುಷ್ಠಾನಗೊಳಿಸಿದರು. ಸರ್ವಧರ್ಮ ಸಮನ್ವಯವನ್ನು ಸಾಧಿಸುವಲ್ಲಿ ಯಶಸ್ವಿಯಾದರು.

**ಧಾರ್ಮಿಕ ಶಿಕ್ಷಣ :** ಗ್ರಂಥಗಳ ಮಹತ್ವವನ್ನು ಅರ್ಥಮಾಡಿಕೊಂಡಿದ್ದ ಹಿರಿಯ ಗುರುಗಳಾದ ಪೂಜ್ಯ ಶ್ರೀ ಚನ್ನಬಸವ ಸ್ವಾಮಿಗಳವರ ಆಶಯ ಹಾಗೂ ಆದೇಶದಂತೆ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಬಿಡದಿಯ ಬಸಪ್ಪ ಶಾಸ್ತ್ರಿಗಳಿಂದ ಕೆಲವು ಕಾಲ ವೇದಪಾಠ, ಜ್ಯೋತಿಷ್ಯ ಮತ್ತು ಧರ್ಮಗ್ರಂಥಗಳ ಶಿಕ್ಷಣ ಪಡೆದರು. ನಂತರ ಬೆಂಗಳೂರಿನ ತಿಪ್ಪಶೆಟ್ಟಿ ಮಠದ ಚರಮೂರ್ತಿ ಶ್ರೀ ಮಹಾಂತ ಶಿವಯೋಗಿಗಳ ಆಶ್ರಯದಲ್ಲಿ ಸ್ವಧರ್ಮದ ಶಿಕ್ಷಣವನ್ನು ಪಡೆದರು. ಅನಂತರ ಶಿವಯೋಗಾನಿಷ್ಠರೂ, ಶ್ರೇಷ್ಠ ಶಿವಾನುಭವಿಗಳೂ ಆಗಿದ್ದ ಚನ್ನಪಟ್ಟಣದ ಕುಡಿನೀರು ಕಟ್ಟಿಮಠದ ಶ್ರೀ ನಿ.ಪ್ರ. ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳವರಿಂದ ಚನ್ನಬಸವೇಶ್ವರ ಶಿವಾನುಭವ ಶಾಸ್ತ್ರ, ಲಿಂಗಾಂಗ ಸಾಮರಸ್ಯ, ಕರಣಹಸಿಗೆ, ಮಾಯಿದೇವನ ಶತಕತ್ರಯ, ಶಾಂತಲಿಂಗ ಸ್ವಾಮಿಗಳ ಅನುಭವ ಮುದ್ರೆ, ಸರ್ಪಭೂಷಣ ಶಿವಯೋಗಿಗಳ ಕೈವಲ್ಯ ಪದ್ಧತಿ, ಷಟ್‌ಸ್ಥಲ ಶಾಸ್ತ್ರ ಮುಂತಾದ ತತ್ತ್ವ ಸಾಹಿತ್ಯ ಮತ್ತು ವಚನ ಗ್ರಂಥಗಳ ತಲಸ್ಪರ್ಶಿ ಅಧ್ಯಯನ ಮಾಡಿ ಜ್ಞಾನಸಂಪತ್ತನ್ನು ತಮ್ಮದಾಗಿಸಿಕೊಂಡರು.

**ಶಿವಕ್ಷೇತ್ರಗಳ ಪ್ರವಾಸ :** 'ಕೋಶ ಓದಿ ನೋಡು, ದೇಶ ತಿರುಗಿ ನೋಡು' ಎಂಬ ಗಾದೆಯನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬ ಆಶಯದಿಂದ ಗುರುಗಳ ಅಪ್ಪಣೆ ಪಡೆದು ಕೆಲವು ಮಠಾಧೀಶ್ವರರೊಡನೆ ಚಿತ್ರದುರ್ಗ, ದಾವಣಗೆರೆ, ಹರಿಹರ, ಹಾನಗಲ್ಲು, ಗದಗ, ಹುಬ್ಬಳ್ಳಿ, ಯಲ್ಲಾಪುರ ಮಾರ್ಗವಾಗಿ ಚನ್ನಬಸವೇಶ್ವರರ



ರಥೋತ್ಸವವನ್ನು ವೀಕ್ಷಿಸುವ ದೃಷ್ಟಿಯಿಂದ ಉಳುವಿಗೆ ಪ್ರಯಾಣ ಬೆಳೆಸಿದರು. ಅಲ್ಲಿಂದ ಮುಂದೆ ಧರ್ಮಸ್ಥಳ, ಗೋಕರ್ಣ, ಶಿರಸಿ, ಬನವಾಸಿ, ಬೆಳಗಾವಿ, ಬಾಗಲಕೋಟೆ, ಕೂಡಲಸಂಗಮ, ಬಾಗೇವಾಡಿ, ಸೊಲ್ಲಾಪುರ, ಕಲ್ಯಾಣ, ಶ್ರೀಶೈಲ, ಬಳ್ಳಾರಿ, ಉರವಕೊಂಡ, ಕೊಟ್ಟೂರು, ಸೊಂಡೂರು ಮುಂತಾದ ಪುಣ್ಯಕ್ಷೇತ್ರಗಳ ದರ್ಶನ ಮಾಡಿ ಅನುಭವ ಶ್ರೀಮಂತಿಕೆಯೊಂದಿಗೆ ಶ್ರೀ ದೇಗುಲಮಠಕ್ಕೆ ಹಿಂತಿರುಗಿದರು.

ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ಮತ್ತಷ್ಟು ಶಿವಕ್ಷೇತ್ರಗಳನ್ನು ಸಂದರ್ಶಿಸಲು ಚನ್ನಪಟ್ಟಣದ ಕುಡಿನೀರು ಕಟ್ಟಿಮಠದ ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು, ಐಜೂರಿನ ವೀರಭದ್ರಪ್ಪನವರೊಡನೆ ಎರಡನೇ ಬಾರಿ ಪ್ರವಾಸ ಕೈಗೊಂಡರು. ಈ ಪ್ರವಾಸ ಸಂದರ್ಭದಲ್ಲಿ ಚಿತ್ರದುರ್ಗ ಶ್ರೀ ಬೃಹನ್ಮಠ, ಮೂರುಸಾವಿರ ಮಠ, ಸಿದ್ಧಾರೂಢ ಮಠಕ್ಕೆ ಭೇಟಿ ನೀಡಿ ಆಯಾ ಮಠಗಳ ಶ್ರೀಗಳವರನ್ನು ದರ್ಶನ ಮಾಡಿ, ಆಧ್ಯಾತ್ಮಿಕವಾಗಿ ವಿಚಾರವಿನಿಮಯ ನಡೆಸಿ ತಮ್ಮ ಅನುಭವ ಶ್ರೀಮಂತಿಕೆಯನ್ನು ಹೆಚ್ಚಿಸಿಕೊಂಡರು.

ಶ್ರೀಗಳವರು ಧಾರವಾಡದಿಂದ ಪುಣೆಗೆ ಪ್ರಯಾಣ ಬೆಳೆಸಿ ಭಕ್ತರ ಮನೆಯಲ್ಲಿ ಅತಿಥ್ಯವನ್ನು ಸ್ವೀಕರಿಸಿ ಮುಂದೆ ಷಹಾಪುರ, ಬೆಳಗಾವಿಗೆ ಪ್ರಯಾಣ ಬೆಳೆಸಿದರು. ಅಲ್ಲಿಂದ ನಾಸಿಕದ ಮೂಲಕ ಗೋದಾವರಿ ತೀರದ ಪಂಚವಟೀ ಕ್ಷೇತ್ರಕ್ಕೆ ತೆರಳಿ ಪವಿತ್ರ ಕ್ಷೇತ್ರವಾದ ಅಥಣಿಗೆ ಪ್ರಯಾಣ ಮಾಡಿದರು. ಮುಂಬಯಿ ನಗರಕ್ಕೆ ಹೋಗಿ ಅಲ್ಲಿನ ಪ್ರಮುಖ ಸ್ಥಳಗಳಿಗೆ ಭೇಟಿ ನೀಡಿ, ಅಲ್ಲಿಂದ ಅಲಹಬಾದ್‌ಗೆ ಪ್ರಯಾಣ ಮುಂದುವರಿಸಿದರು. ವಾರಣಾಸಿಗೆ (ಕಾಶಿ) ಹೋಗಿ ಅಲ್ಲಿ ಜ್ಞಾನ ವೈರಾಗ್ಯಗಳ ಮಹಾನಿಧಿ ಶ್ರೀ ಗೌರೀಶಂಕರ ಸ್ವಾಮಿಗಳವರನ್ನು ದರ್ಶನ ಮಾಡಿ ಹೊರಡುವಾಗ ಶ್ರೀ ಗೌರೀಶಂಕರ ಸ್ವಾಮಿಗಳು ಶ್ರೀ ನಿರ್ವಾಣ ಸ್ವಾಮಿಗಳವರನ್ನು ಕುರಿತು "ಬುದ್ಧಿ ತಾವಿದ್ದ ಕಡೆ ಹುಲಿ ಗೋವುಗಳೂ ಪರಸ್ಪರ ವೈಷಮ್ಯವನ್ನು ಬಿಟ್ಟು ಸಹಜ ಪ್ರೇಮದಿಂದಿರುತ್ತವೆ" ಎಂದು ಉದ್ಗರಿಸಿದರಂತೆ. ಅವರ ಹೃದಯದಿಂದ ಪುಟಿದು ಬಂದ ಮಾತುಗಳು ಶ್ರೀ ನಿರ್ವಾಣ ಸ್ವಾಮಿಗಳವರ ವ್ಯಕ್ತಿತ್ವಕ್ಕೆ ಭಾಷ್ಯ ಬರೆದಂತಿವೆ.

ಕಾಶಿಯಿಂದ ಹೊರಟು ಅನೇಕ ಸ್ಥಳಗಳಿಗೆ ಭೇಟಿ ನೀಡಿ ಬೆಂಗಳೂರು ಮೂಲಕ ಕನಕಪುರಕ್ಕೆ ಹಿಂದಿರುಗಿದ ಸಂದರ್ಭದಲ್ಲಿ ಪೂಜ್ಯ ಶ್ರೀ ಇಮ್ಮಡಿ ಹುಚ್ಚಪ್ಪ ಸ್ವಾಮಿಗಳು ಜೀವನ ಪ್ರಯಾಣದ ಅಂತಿಮ ಘಟ್ಟದಲ್ಲಿದ್ದರು. ಶ್ರೀ ಇಮ್ಮಡಿ ಸ್ವಾಮಿಗಳವರಿಂದ ಕರ್ಣಮಂತ್ರ ಜಪೋಚ್ಚಾರಣೆ ಮುಂತಾದ ಸಾಂಪ್ರದಾಯಿಕ ಆಚರಣೆಯ ನಂತರ ಶ್ರೀ ಹುಚ್ಚಪ್ಪ ಸ್ವಾಮಿಗಳು ಲಿಂಗದೊಳಗೊಂದಾದರು.

**ಮಠದ ಆಸ್ತಿಗಾಗಿ ಹೋರಾಟ :** ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳವರಿಗೆ ಅನೇಕ ಸಂಕಷ್ಟಗಳು ಎದುರಾದವು. ಶ್ರೀ ದೇಗುಲಮಠದ ಆಸ್ತಿ ಎಲ್ಲವೂ ದೇವಾದಾಯವೆಂದು ಜಿಲ್ಲಾಧಿಕಾರಿಗಳು ನಿರ್ಧರಿಸಿದ್ದರು. ಅಂತಹ ವಿಷಮ ಪರಿಸ್ಥಿತಿಯಲ್ಲಿ ಎದೆಗುಂದದೆ ಪೂಜ್ಯ ಶ್ರೀಗಳು ಸ್ಥಿತಪ್ರಜ್ಞರಂತೆ ಎಲ್ಲವೂ ಶಿವನ ಇಚ್ಛೆ ಎಂದು ಭಾವಿಸಿ ಹೋರಾಟಕ್ಕೆ ದೃಢಸಂಕಲ್ಪ ಮಾಡಿ ದೃಢ ಹೆಜ್ಜೆಯಿಟ್ಟರು. ಗುರು ಪರಂಪರೆಯ ಶ್ರೀರಕ್ಷೆ ತಮ್ಮ ಮೇಲಿರುವುದೆಂಬ ನಂಬಿಕೆ, ಆತ್ಮವಿಶ್ವಾಸ ಹುಸಿಯಾಗಲಿಲ್ಲ. ಅಂತರಂಗ ಶುದ್ಧಿಯಿಂದ ಕೈಗೊಂಡ ಯಾವುದೇ ಕೆಲಸ ಸಫಲವಾಗುತ್ತದೆ ಎಂಬುದಕ್ಕೆ ಶ್ರೀ ದೇಗುಲಮಠದ ಸಮಸ್ಯೆಗಳು ಮಂಜಿನಂತೆ ಕರಗಿ ಆಹ್ಲಾದಕರ ವಾತಾವರಣ ಉಂಟಾದುದು ಒಂದು ಉತ್ತಮ ನಿದರ್ಶನ.

ಶ್ರೀಗಳವರ ಮುಗ್ಧತೆ ಮಾನವೀಯತೆ, ಸಮಾಜದ ಹಿತದೃಷ್ಟಿಗೆ ಮಾರುಹೋದ ಸುತ್ತಮುತ್ತಲ ಗ್ರಾಮಗಳ ಸದ್ಭಕ್ತರು ಯಾವುದೇ ರೀತಿಯ ಪೂರ್ವಾಗ್ರಪೀಡಿತ ರಾಗದೆ ವೈಯಕ್ತಿಕವಾಗಿ, ಸಾಮೂಹಿಕವಾಗಿ ಸಹಕರಿಸಿ ಪ್ರೋತ್ಸಾಹಿಸಿದರು, ನೆರವಿನ ಹಸ್ತ ನೀಡಿದರು. ಪೂಜ್ಯರಿಗೆ ದೊರೆತ ಅಭೂತಪೂರ್ವ ಸಹಕಾರದಿಂದ ವಿರೋಧಿ ಬಣದವರು ವಿಸ್ಮಿತರಾಗಿ ಮೌನವಹಿಸಿದರು. ಶ್ರೀಗಳವರು ಸಾಧನಾ ಪಥದಲ್ಲಿ ಮುನ್ನಡೆಯುವುದನ್ನು ಮೆಚ್ಚಿ ಇಡೀ ಸಮಾಜವೇ ಅವರಿಗೆ ಆಸರೆಯಾಗಿ ನಿಂತಿತು. ಚಿತ್ರದುರ್ಗದ ಬೃಹನ್ಮಠಾಧೀಶ್ವರರಾದ ಶ್ರೀ ಮನ್ಮಹರಾಜ ನಿರಂಜನ ಜಗದ್ಗುರು ಜಯದೇವ ಮುರುಘಾ ರಾಜೇಂದ್ರ ಸ್ವಾಮಿಗಳು ಶ್ರೀಮಠಕ್ಕೆ ದಯಮಾಡಿಸಿ ನಿರೂಪವಿತ್ತರು. ಇದೇ ಸಂದರ್ಭದಲ್ಲಿ ಘನತೆವೆತ್ತ ಮೈಸೂರು ನ್ಯಾಯಾಂಗವೂ ಕೂಡ ಅದೇ ರೀತಿಯ ತೀರ್ಮಾನ ನೀಡಿತು. ಇದರಿಂದ ಶ್ರೀಮಠದ ಆಸ್ತಿಯ ಗೊಂದಲ ಸಮಾಧಾನಕರವಾಗಿ ಪರಿಹಾರವಾಯಿತು. ಇದು ಪೂಜ್ಯ ಶ್ರೀಗಳವರ ತಪಸ್ಸಿನ, ಶ್ರೀಮಠದ ಗುರುಪರಂಪರೆಯ ಆಶೀರ್ವಾದ, ಅನುಗ್ರಹದ ಫಲ.

**ಶ್ರೀಮಠದ ಅಭಿವೃದ್ಧಿ ಚಟುವಟಿಕೆಗಳು :** ಭಕ್ತರ ಮುಕ್ತ ಮನಸ್ಸಿನ ನೆರವು, ಸಹಕಾರದಿಂದ ಚಕ್ಕಮಠದ ಗುರುಗಳಾದ ಶ್ರೀ ಇಮ್ಮಡಿ ಮರುಳಸಿದ್ಧ ಸ್ವಾಮಿಗಳ ನೇತೃತ್ವದಲ್ಲಿ ಮಠದ ಜೀರ್ಣೋದ್ಧಾರ ಕಾರ್ಯಗಳು ನಡೆದವು. ಮಠದ ಗದ್ದುಗೆ ಕಟ್ಟಡ, ಸ್ನಾನ, ಪ್ರಸಾದ

ಗೃಹಗಳು, ಕೈಸಾಲೆಗಳು ಜೀರ್ಣಾವಸ್ಥೆಯಲ್ಲಿದ್ದು, ಗೋಡೆಗಳು ಬಿರುಕು ಬಿಟ್ಟು ಉರುಳುವ ಸ್ಥಿತಿಯಲ್ಲಿದ್ದವು. ಕ್ರಿ.ಶ. ೧೯೩೩ ರಲ್ಲಿ ಬೆಂಗಳೂರು ಗೌಡನಪಾಳ್ಯದ ಶ್ರೀ ಗುರುಪಾದಪ್ಪ ಎಂಬ ಸದ್ಭಕ್ತರು ಮಾಡಿದ ಆರ್ಥಿಕ ನೆರವಿನಿಂದ ೧೫ ಅಂಕಣಗಳ ಕಲ್ಲಿನ ಗದ್ದುಗೆ ಕಟ್ಟಡ ಹಾಗೂ ಮಹಾದ್ವಾರವು ನಿರ್ಮಾಣವಾದವು. ಈ ಸತ್ಕಾರ್ಯದಲ್ಲಿ ಶಿಲ್ಪಘಟ್ಟದ ಶ್ರೀ ನಂಜುಂಡಪ್ಪನವರು, ಕನಕಪುರದ ಪಂಡಿತ ಶ್ರೀ ನಂಜುಂಡಪ್ಪನವರು ಹಾಗೂ ಇತರೆ ಸ್ಥಳೀಯ ಮುಖಂಡರು ವಿಶೇಷ ಆಸಕ್ತಿ ವಹಿಸಿದರು. ಈ ನೂತನ ಕಟ್ಟಡಗಳ ಪ್ರಾರಂಭೋತ್ಸವವು ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಈ ಸಂದರ್ಭದಲ್ಲಿ ನಡೆದ ಏಕಾದಶ ಮಂಟಪ ಪೂಜೆ ಮತ್ತು ಜಂಗಮರಾಧನೆಯಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ಭಕ್ತರು, ಅಭಿಮಾನಿಗಳು ಭಾಗವಹಿಸಿ ಕಾರ್ಯಕ್ರಮ ಯಶಸ್ವಿಯಾಗುವಂತೆ ಮಾಡಿದರು.

ಕ್ರಿ.ಶ. ೧೯೩೪ ರಲ್ಲಿ ಚಿಕ್ಕಮಠದ ಪೂಜ್ಯ ಶ್ರೀ ಇಮ್ಮಡಿ ಮರುಳಸಿದ್ಧ ಸ್ವಾಮಿಗಳು ಲಿಂಗೈಕ್ಯರಾದರು. ನಂತರ ಈ ಎರಡೂ ಮಠಗಳ ಆಡಳಿತದ ಜವಾಬ್ದಾರಿಯನ್ನು ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ವಹಿಸಿಕೊಂಡರು.

**ಪೂಜ್ಯ ಶ್ರೀಗಳವರ ಕ್ರಿಯಾಶೀಲ ಆದರ್ಶ ವ್ಯಕ್ತಿತ್ವ :** ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳು ವಿರಕ್ತಾಶ್ರಮ ಧರ್ಮವನ್ನು ನಿಷ್ಠೆಯಿಂದ, ಶ್ರದ್ಧೆಯಿಂದ, ಭಕ್ತಿಯಿಂದ ಯಾವುದೇ ರೀತಿಯ ಲೋಪವಾಗದಂತೆ ಆಚರಿಸುವುದರ ಮೂಲಕ ಎಲ್ಲರ ಗೌರವಕ್ಕೆ ಪಾತ್ರರಾಗಿದ್ದರು. ಅವರು ಶಿವಯೋಗಾನಿಷ್ಠರಾಗಿದ್ದರು. ಜ್ಞಾನಕ್ರಿಯಾ ಸಮನ್ವಿತರೂ, ಕ್ರಿಯಾಮೂರ್ತಿಗಳೂ, ಶಾಂತ ಸ್ವಭಾವದವರು, ಸರಳತೆ, ಸಜ್ಜನಿಕೆಯ ಸಾಕಾರಮೂರ್ತಿಗಳಾಗಿದ್ದರು. 'ನಿರ್ವಾಣ' ಪದಕ್ಕೆ ಸಾರ್ಥಕ ನಾಮವುಳ್ಳವರಾಗಿದ್ದರು. ಭಕ್ತರ ಬಗ್ಗೆ ಪ್ರೀತಿ, ಅಭಿಮಾನವುಳ್ಳವರಾಗಿದ್ದರು. ಸಕಲ ಪ್ರಾಣಿಗಳಲ್ಲಿ ಅಪಾರವಾದ ಪ್ರೀತಿ ಹೊಂದಿದ್ದರು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುವ ಕರುಣಾಮೂರ್ತಿಗಳಾಗಿದ್ದರು. ಶ್ರೀಮಠದಲ್ಲಿ ವಾಸವಾಗಿದ್ದ ಹಸು ಕರುಗಳಲ್ಲದೆ ನಾಯಿ, ಬೆಕ್ಕುಗಳಿಗೂ ಆಹಾರ ನೀಡಿ, ಸಂತೈಸಿದ ನಂತರವೇ ತಾವು ಪೂಜೆ ಮಾಡಿ ಪ್ರಸಾದ ಸ್ವೀಕರಿಸುತ್ತಿದ್ದರು.

**ಪೂಜ್ಯ ಶ್ರೀಗಳವರ ದಿನಚರಿ :** ಪೂಜ್ಯ ಶ್ರೀಗಳವರು ಪ್ರತಿನಿತ್ಯ ಪ್ರಾತಃಕಾಲದಲ್ಲಿ ಮಾಡುತ್ತಿದ್ದುದು ಗೃಹಣಿಯ ಕೆಲಸ. ನೀರೊಲೆಗೆ ಬೆಂಕಿ ಹಾಕಿ, ಉಳಿದವರ ಸ್ನಾನಕ್ಕೆ ಸಿದ್ಧತೆ ಮಾಡುತ್ತಿದ್ದರು. ಹಾಲು ಕರೆಯುವುದು, ಕರೆಸುವುದು, ತರಕಾರಿ ಬಿಡಿಸಿ ಕೊಡುವುದು, ದನಕರುಗಳಿಗೆ ಮೇವು, ನೀರಿನ ವ್ಯವಸ್ಥೆ ಮಾಡುವುದು ಇವೇ ಮೊದಲಾದ ಕೆಲಸಗಳನ್ನು ನಿಷ್ಠೆ, ಶ್ರದ್ಧೆಯಿಂದ ಮಾಡುತ್ತಿದ್ದರು. ಅವರೆಂದೂ, ಹಮ್ಮು ಬಿಮ್ಮುಗಳನ್ನು ಹತ್ತಿರ ಸುಳಿಯಲು ಬಿಡುತ್ತಿರಲಿಲ್ಲ. ಈ ಮಧ್ಯೆ ಬರುವ ನ್ಯಾಯ ಪಂಚಾಯಿತಿ ಮಾಡುವುದು, ಪತ್ರಿಕೆಗಳ ಮೇಲೆ ಕಣ್ಣಾಡಿಸುವುದು, ಸುದ್ದಿ ಸಂಗ್ರಹ ಮಾಡುವುದು, ಶ್ರೀಗಳವರ ದಿನಚರಿಯ ಭಾಗವಾದ ಕಾಯಕವಾಗಿದ್ದವು.

**ದಾಸೋಹಮೂರ್ತಿಗಳು :** ಪೂಜ್ಯ ಶ್ರೀಗಳು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ೧೯೪೭ ರಲ್ಲಿ ಶ್ರೀ ನಿರ್ವಾಣೇಶ್ವರ ವಿದ್ಯಾರ್ಥಿ ನಿಲಯವನ್ನು ಆರಂಭಿಸಿದರು. ದರ್ಶನಾರ್ಥಿಗಳು ಶ್ರೀಮಠಕ್ಕೆ ಬಂದು ಪೂಜ್ಯರ ದರ್ಶನ ಮಾಡುವಾಗ 'ಪ್ರಸಾದ ಸ್ವೀಕರಿಸಿ' ಎಂದು ಹೇಳುವುದನ್ನು ಎಂತಹ ಕಠಿಣ ಪರಿಸ್ಥಿತಿಯಲ್ಲೂ ಮರೆಯುತ್ತಿರಲಿಲ್ಲ. ವಿದ್ಯಾರ್ಥಿ ನಿಲಯ ಆರಂಭವಾದ ನಂತರ ಶ್ರೀಗಳವರೇ ಸ್ವತಃ ಅಡುಗೆ ಮಾಡಿ ಬಡಿಸುತ್ತಿದ್ದರಲ್ಲದೆ ತಾವೇ ವಿದ್ಯಾರ್ಥಿಗಳಿಗೆ ಪ್ರಸಾದವನ್ನು ಬಡಿಸುತ್ತಾ ಮಕ್ಕಳಿಗೆ ಹೊಟ್ಟೆ ತುಂಬಾ ಊಟ ಮಾಡುವಂತೆ ಹೇಳುವುದರ ಮೂಲಕ ಮಾತೃ ವಾತ್ಸಲ್ಯವನ್ನು ತೋರಿಸುತ್ತಿದ್ದರು. ಶ್ರೀಮಠಕ್ಕೆ ಬರುತ್ತಿದ್ದ ಭಕ್ತರಿಗೆ ಜಾತಿ ಭೇದವಿಲ್ಲದೆ ಎಲ್ಲರನ್ನು ಸಮಾನ ದೃಷ್ಟಿಯಿಂದ, ಪ್ರೀತಿಯಿಂದ ಆದರಿಸಿ ತಾವೇ ಪ್ರಸಾದ ಬಡಿಸುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ರಾತ್ರಿಯ ವೇಳೆ ಅನಿರೀಕ್ಷಿತವಾಗಿ ಬರುತ್ತಿದ್ದ ಭಕ್ತರಿಗೆ ಪ್ರಸಾದ ಬಡಿಸಿ ಅವರು ಮಲಗಲು ವ್ಯವಸ್ಥೆ ಮಾಡುತ್ತಿದ್ದರು.

ಪೂಜ್ಯ ಶ್ರೀಗಳವರು ವಿದ್ಯಾರ್ಥಿಗಳಿಗೆ ಶಿಕ್ಷಣ-ದಾಸೋಹದ ಜೊತೆಯಲ್ಲಿಯೇ ಅವರಿಗೆ ದೈವನಿಷ್ಠೆ, ಸಮಾಜ ಪ್ರೇಮ, ಕಾಯಕ ನಿಷ್ಠೆ, ತ್ಯಾಗ, ಸಮಾನತೆ ಇತ್ಯಾದಿ ವಿಷಯಗಳನ್ನು ಕುರಿತು ಶಿವನುಡಿಗಳ ಮೂಲಕ ಉತ್ತಮ ಸುಸಂಸ್ಕೃತ ನಾಗರಿಕರನ್ನಾಗಿ ಮಾಡುವ ಕೈಂಕರ್ಯದಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದರು.

**ಶಿಷ್ಯ ಸಂಪತ್ತು :** ಪೂಜ್ಯ ಶ್ರೀಗಳವರು ಅಪಾರವಾದ ಶಿಷ್ಯ ವೃಂದವನ್ನು ಹೊಂದಿದ್ದರು. ಅವರಲ್ಲಿ ಅಂತರ್ಗತವಾಗಿದ್ದ ಸರಳತೆ, ಸಜ್ಜನಿಕೆ, ಹೃದಯ ವೈಶಾಲ್ಯತೆ, ಮಾತೃವಾತ್ಸಲ್ಯ ಕರುಣೆ ಇವೆಲ್ಲ ಗುಣಗಳಿಂದ ಭಕ್ತರ ಮನಸ್ಸನ್ನು ಸೂರೆಗೊಂಡಿದ್ದರು. ಮೈಸೂರು ಪ್ರದೇಶದ ದಕ್ಷಿಣ ಭಾಗಗಳಲ್ಲಿ ಅವರು ದಯಮಾಡಿಸದ ಮನೆಯೇ ವಿರಳವಾಗಿತ್ತು. ಭಕ್ತರು ಯಾರೇ ಆಗಲಿ, ಭಕ್ತಿಯಿಂದ, ಪ್ರೀತಿಯಿಂದ ಬಿನ್ನಹ ಮಾಡಿದರೆ ಅವರ



ಸಿರಿ-ಸಂಪತ್ತುಗಳನ್ನು, ಬಡತನವನ್ನು ಗಮನಿಸದೆ ಅವರ ಮನೆಗೆ ಶಿವಪೂಜೆಗೆ ದಯಮಾಡಿಸುತ್ತಿದ್ದರು. ಶಿಷ್ಯರು ಕೊಡುವ ಅಲ್ಪ ಕಾಣಿಕೆಯಿಂದಲೇ ತೃಪ್ತಿಪಡುತ್ತಿದ್ದರು. ಅವರು ಪಡೆಯುತ್ತಿದ್ದ ಕಾಣಿಕೆಯನ್ನು ಶ್ರೀಮಠದಲ್ಲಿನ ದಾಸೋಹಕ್ಕೆ ವಿನಿಯೋಗಿಸುತ್ತಿದ್ದರು. ಅವರು ಯಾರಿಂದಲೂ ಯಾವುದನ್ನೂ ನಿರೀಕ್ಷೆ ಮಾಡುತ್ತಿರಲಿಲ್ಲ. ಕೊಡುವವನು ಶಿವನಿರುವಾಗ ನನಗೇಕೆ ಚಿಂತೆ ಎಂದು ಹೇಳುತ್ತಿದ್ದರು.

ಪರಮಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಶಿವನಲ್ಲಿ ಅಪಾರವಾದ ಭಕ್ತಿಯನ್ನು ಹೊಂದಿದ್ದು, ತಮ್ಮ ಅಮೂಲ್ಯ ವೇಳೆಯನ್ನೆಲ್ಲಾ ಶಿವಪೂಜೆ, ಶಿವಭಜನೆ, ಶಿವಸ್ಮರಣೆ, ಶಿವಾರ್ಚನೆ, ಶಿವಾರ್ಪಣೆ ಕಡೆಗೆ ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಶಿವಯೋಗದಲ್ಲಿಯೇ ಮಗ್ನರಾಗಿರುತ್ತಿದ್ದರು.

ತ್ರಿವಿಧ ದಾಸೋಹಿ, ಕರ್ನಾಟಕ ರತ್ನ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಘನಶಿವ ವ್ಯಕ್ತಿತ್ವವನ್ನು ಹೀಗೆ ಅನಾವರಣಗೊಳಿಸಿದ್ದಾರೆ.

"ಪೂಜ್ಯ ನಿರ್ವಾಣ ಮಹಾಸ್ವಾಮಿಗಳವರ ವ್ಯಕ್ತಿತ್ವ ಬಹುದೊಡ್ಡದು. ಎತ್ತರದ್ದು ಅರಿವವರಿಗೆ ಮಾತ್ರ ಅರಿವಾಗಬಲ್ಲದ್ದು. ಅವರ ಜೀವನ ದರ್ಶನ ನಿಜವನರಿವ ನಿಶ್ಚಿಂತರಾಗಿ ಮಹತನರಿವ ಮಹಾಂತರಾಗಿ, ಶಬ್ದ ಮುಗ್ಧರೆನಿಸಿ ದಿವ್ಯಜೀವನದ ಶರಣ ಪಥವನ್ನು ಕ್ರಮಿಸಿ ಮಹಾಬೆಳಗಾದ ಪುಣ್ಯ ಪುರುಷರವರು. ಶ್ರೀಗಳು ವಿದ್ಯಾವಂತರಾಗಿ ಪಂಡಿತರೆನಿಸಿಕೊಳ್ಳದೇ ಇದ್ದರೂ ಅನುಷ್ಠಾನದ ಬಲದಿಂದ ಆಳವಾದ ಆತ್ಮಾನುಭವವುಳ್ಳವರಾಗಿದ್ದರು. ಸರಳತೆ, ಸಹಜತೆ, ಸರ್ವಸಮತಾಭಾವ, ಭೂತಾನುಕಂಪ ಮೊದಲಾದ ಶ್ರೇಷ್ಠ ಮಾನವೀಯ ಮೌಲ್ಯಗಳ ರತ್ನಕಣಿಯೇ ಆಗಿದ್ದರು. ಉದಾರ ಚರಿತಾನಾದ ವಸುದೈವ ಕುಟುಂಬಕಂ ಎಂಬ ಆರ್ಯೋಕ್ತಿಗೆ ಭಾಷ್ಯವಾಗಿ ಬಾಳಿದರು, ಬೆಳಗಿದರು.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಒಂದೊಂದು ಶಿವನುಡಿಯೂ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳವರ ಘನವ್ಯಕ್ತಿತ್ವಕ್ಕೆ ಹೊನ್ನ ಕಳಶವಿಟ್ಟಂತಾಗಿದೆ.

ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ತಮ್ಮ ಮಂಗಳ ನುಡಿಗಳಲ್ಲಿ ಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಶಿವಯೋಗಿಗಳವರು ನಡೆಸಿದ ಸಾರ್ಥಕ ಜೀವನವನ್ನು ಹೃದಯತುಂಬಿ ಸ್ಮರಿಸಿದ್ದಾರೆ.

"ಲಿಂಗೈಕ್ಯರಾದ ಪೂಜ್ಯ ಶ್ರೀ ನಿರ್ವಾಣ ಮಹಾಸ್ವಾಮಿಗಳವರ ಜೀವನ ನಿಜವಾಗಿಯೂ ಯೋಗಿಕವಾಗಿದ್ದೀತೇ ಹೊರತು ಲೌಕಿಕವಾದದಾಗಿರಲಿಲ್ಲ. ನೂರುಮೂರು ವರುಷಗಳ ತುಂಬು ಬಾಳಿನಲ್ಲಿ ಆಡಂಬರ ರಹಿತವಾದ ಅವರ ನಿಷ್ಕಾಮ ಕರ್ಮವನ್ನು ಕಂಡು ನಾವೆಲ್ಲ ಅಚ್ಚರಿಪಟ್ಟಿದ್ದೇವೆ. ಈ ಕಾಲದಲ್ಲಿಯೂ ಸದ್ದುಗದ್ದಲವಿಲ್ಲದೆ ಜನರ ಹೃದಯವನ್ನು ಗೆದ್ದು ಸತ್ಪಥದೆಡೆಗೆ ಒಯ್ದು ಪುಣ್ಯಾತ್ಮರಿದ್ದರಲ್ಲ ಎನ್ನುವುದೇ ಆಶ್ಚರ್ಯಕ್ಕೆ ಕಾರಣ. ಪೂಜ್ಯ ಜಗದ್ಗುರುಗಳ ಒಂದೊಂದು ನುಡಿಗಳೂ ಮೌಲಿಕವಾದವುಗಳು.

**ಲಿಂಗೈಕ್ಯ :** ಪರಮ ವೈರಾಗ್ಯಮೂರ್ತಿಗಳೂ, ಶಿವಯೋಗ ನಿಷ್ಠರೂ, ಮಾತೃವಾತ್ಸಲ್ಯವುಳ್ಳವರೂ, ಆದ ಪರಮಪೂಜ್ಯ ಶ್ರೀ ಇಮ್ಮಡಿ ನಿರ್ವಾಣ ಸ್ವಾಮಿಗಳವರು ತಮ್ಮ ಅಂತಿಮ ದಿನಗಳನ್ನು ಶ್ರೀ ಸಿದ್ಧಗಂಗಾ ಮಠದಲ್ಲಿ ಕಳೆದರು. ಮೊದಲಿನಿಂದಲೂ ಶ್ರೀ ಸಿದ್ಧಗಂಗಾ ಮಠ ಹಾಗೂ ಶ್ರೀ ದೇಗುಲಮಠಕ್ಕೂ ಅವಿನಾಭಾವ ಸಂಬಂಧ. ಶ್ರೀ ಇಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ೧೦೩ ವರ್ಷಗಳ ಸಾರ್ಥಕ ತುಂಬು ಜೀವನ ನಡೆಸಿ ೩೦-೧-೧೯೭೭ ರ ಭಾನುವಾರ ಸಂಜೆ ೬.೪೫ ಗಂಟೆಗೆ ಲಿಂಗದೊಳಗೊಂದಾದರು. ಅವರ ಪಾಲಿಗೆ ಮರಣ ವೆಂಬುದು ಮಹಾನವಮಿಯಾಗಿತ್ತು. ಶ್ರೀಗಳವರು ಅವಸಾನದ ಅಂತಿಮ ಸಮಯದಲ್ಲಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ದೇಗುಲಮಠದ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಮಹಾಲಿಂಗ ಸ್ವಾಮಿಗಳು, ಕಂಚುಗಲ್ ಬಂಡೇಮಠದ ಚರಮೂರ್ತಿ ಶ್ರೀ ಶಿವರುದ್ರ ಸ್ವಾಮಿಗಳು ಹಾಗೂ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಇದ್ದರು. ಪೂಜ್ಯ ಶ್ರೀ ನಿರ್ವಾಣ ಮಹಾಸ್ವಾಮಿಗಳವರು ಲಿಂಗೈಕ್ಯರಾದರೆಂಬ ಸುದ್ದಿ ತಿಳಿದು ಭಕ್ತಸಮೂಹ ತಂಡೋಪತಂಡವಾಗಿ ಆಗಮಿಸಿ ಪೂಜ್ಯ ಶ್ರೀಗಳವರ ಅಂತಿಮ ದರ್ಶನ ಪಡೆಯಿತು. ಜನವರಿ ೩೧ ರಂದು ಶಿವಯೋಗಿಗಳ ಶಿವದೇಹದ ಮೆರವಣಿಗೆ ಕನಕಪುರ ಪಟ್ಟಣದ ಪ್ರಮುಖ ಬೀದಿಗಳಲ್ಲಿ ನಡೆದು ಸಂಜೆ ಸಕಲ ಸಾಂಪ್ರದಾಯಿಕ ವಿಧಿ ವಿಧಾನಗಳೊಂದಿಗೆ ಸಮಾಧಿ ಕಾರ್ಯ ವಿಧ್ಯುಕ್ತವಾಗಿ ಶ್ರೀ ದೇಗುಲಮಠದಲ್ಲಿ ನೆರವೇರಿಸಲಾಯಿತು.

ಶ್ರದ್ಧಾಂಜಲಿ

# ಪದ್ಮಶ್ರೀ ಸೂಲಗಿತ್ತಿ ನರಸಮ್ಮನವರು ವಿಧಿವಶ



ವೈದ್ಯಕೀಯ ಕ್ಷೇತ್ರವೇ ವಿಸ್ಮಯಪಡುವಂತೆ ಸಾಧನೆ ಮಾಡಿದ್ದ ಪದ್ಮಶ್ರೀ ಪುರಸ್ಕೃತೆ ಸೂಲಗಿತ್ತಿ ನರಸಮ್ಮ ಡಿಸೆಂಬರ್ ೨೫ ರಂದು ವಿಧಿವಶರಾದರೆಂದು ತಿಳಿಸಲು ಸಿದ್ಧಗಂಗಾ ವಿಷಾದಿಸುತ್ತದೆ. ಅವರಿಗೆ ೯೮ ವರ್ಷವಾಗಿತ್ತು.

ತಾನು ಅನಕ್ಷರಸ್ಥೆಯಾದರೂ ತಜ್ಞ ಪ್ರಸೂತಿ ವೈದ್ಯರಂತೆ ೧೫ ಸಾವಿರಕ್ಕೂ ಹೆಚ್ಚು ಹೆರಿಗೆ ಮಾಡಿಸಿ ವೈದ್ಯರೇ ಅಚ್ಚರಿಪಡುವಂತೆ ಮಾಡಿದ ನರಸಮ್ಮನಿಗೆ ಈ ಪ್ರಸೂತಿ ವಿದ್ಯೆ ಬಂದುದು ತಮ್ಮ ಅಜ್ಜಿ ಮಂಗಮ್ಮನವರಿಂದ. ಅವರು ಮಾಡಿದ ನಿಸ್ವಾರ್ಥ ಸೇವೆ ಅನುಕರುಣೀಯವಾದುದು. ನರಸಮ್ಮ ಹೆರಿಗೆ ಮಾಡಿಸಿದ ನಂತರವೂ ಬಾಣಂತಿಯರ ಆರೋಗ್ಯವನ್ನು ತುಂಬಾ ಎಚ್ಚರಿಕೆಯಿಂದ ಗಮನಿಸಿ ಆರೈಕೆ ಮಾಡುತ್ತಿದ್ದರು. ತಾಯಿ ಮತ್ತು ಮಗುವಿನ ಆರೋಗ್ಯ, ಪಥ್ಯವನ್ನು ತಾವೇ ನೋಡಿಕೊಳ್ಳುತ್ತಿದ್ದರು. ಕಿರುನಾಲಿಗೆ, ಶೀತದಗಂಟು, ಅಸ್ತಮಾ ಕೆಮ್ಮಿಗೆ ಗಿಡಮೂಲಿಕೆಗಳಿಂದ ತಯಾರಿಸಿದ ಔಷಧಿ ನೀಡಿ ಗುಣಪಡಿಸುತ್ತಿದ್ದರು.

ಪ್ರಸೂತಿ ಮಾಡಿಸುವಲ್ಲಿ ಅನುಭವ ಶ್ರೀಮಂತಿಕೆಯನ್ನು ತಮ್ಮದಾಗಿಸಿಕೊಂಡಿದ್ದ ನರಸಮ್ಮನವರು ಗರ್ಭಿಣಿಯ ಪ್ರಸವದ ದಿನವನ್ನು ನಿಖರವಾಗಿ ಹೇಳಬಲ್ಲವರಾಗಿದ್ದರು. ಗರ್ಭಿಣಿಯ ದೇಹಲಕ್ಷಣ ನೋಡಿ ಮಗು ಗಂಡೋ, ಹೆಣ್ಣೋ ಎಂಬುದನ್ನು ಖಚಿತವಾಗಿ ಹೇಳುವಷ್ಟು ಅಪಾರವಾದ ಜ್ಞಾನವನ್ನು ಹೊಂದಿದ್ದರು. ಭಾರತೀಯ ಸಾಂಪ್ರದಾಯಿಕ ಪದ್ಧತಿಯಲ್ಲಿ ಗರ್ಭಿಣಿಯರಿಗೆ ಆರೋಗ್ಯ ಸಲಹೆ ನೀಡಿ ನಾಟಿ ಔಷಧಿ ನೀಡುತ್ತಿದ್ದರು.

ಶ್ರೀಮತಿ ನರಸಮ್ಮನವರು ಹುಟ್ಟಿದೂರು ತುಮಕೂರು ಜಿಲ್ಲೆ ಪಾವಗಡ ತಾಲ್ಲೂಕಿನ ಪುಟ್ಟಗ್ರಾಮ ಕೃಷ್ಣಾಪುರ. ಬಡ ಕುಟುಂಬದಲ್ಲಿ ಜನಿಸಿದ ನರಸಮ್ಮನಿಗೆ ೧೨ನೇ ವಯಸ್ಸಿನಲ್ಲೇ ಅಂಜನಪ್ಪ ಎಂಬುವರ ಜೊತೆ ಮದುವೆ ಮಾಡಲಾಯಿತು. ೧೨ ಮಕ್ಕಳಿಗೆ ಜನ್ಮ ನೀಡಿದ ಈ ಮಹಾತಾಯಿಗೆ ೩೬ ಮೊಮ್ಮಕ್ಕಳಿವೆ. ತಾವು ಶಾಲೆಗೆ ಹೋಗಿ ಕಲಿಯದಿದ್ದರೂ, ತನ್ನ ಎಲ್ಲಾ ಮಕ್ಕಳಿಗೆ ಶಿಕ್ಷಣ ಕೊಡಿಸಿದ್ದಾರೆ. ಅಷ್ಟೇ ಅಲ್ಲ ಸುತ್ತಮುತ್ತಲಿನ ಜನರಿಗೆ ವಿದ್ಯೆಯ ಮಹತ್ವವನ್ನು ತಿಳಿಸಿ ಅವರೆಲ್ಲ ಶಿಕ್ಷಣ ಪಡೆಯುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದರು. ವೈದ್ಯಕೀಯ ಕ್ಷೇತ್ರದಲ್ಲಿನ ನರಸಮ್ಮನ ಅನುಭವ ಕೌಶಲ್ಯವನ್ನು ನೋಡಿದ್ದ ವೈದ್ಯರು ಸರ್ಕಾರಿ ಕೆಲಸಕ್ಕೆ ಸೇರುವಂತೆ ಆಹ್ವಾನ ನೀಡಿದರೂ ವಿನಮ್ರತೆಯಿಂದ ನಿರಾಕರಿಸಿ ತಾನು ನಂಬಿರುವ ಸೂಲಗಿತ್ತಿ ಕೆಲಸ ಮುಂದುವರಿಸಿದ್ದರು. ಈ ವಿದ್ಯೆ ಅವರಿಗೆ ವಂಶ ಪಾರಂಪರ್ಯವಾಗಿ ಬಂದಿತ್ತು. ನೂರಾರು ಹಳ್ಳಿಗರ ಬಾಯಲ್ಲಿ 'ಅಮ್ಮ' ಎಂದು ಕರೆಯಿಸಿಕೊಳ್ಳುವ ಭಾಗ್ಯ ಅವರದಾಗಿತ್ತು.



ಶೋಭಾನೆ ಪದ, ಜಾನಪದ ಹಾಡುಗಳನ್ನು ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಹಾಡುತ್ತಿದ್ದ ಶ್ರೀಮತಿ ನರಸಮ್ಮನವರು ಪ್ರಶಸ್ತಿ, ಬಿರುದು, ಸನ್ಮಾನಗಳ ಹಿಂದೆ ಹೋಗಲಿಲ್ಲ. ಅವರು ಮಾಡುತ್ತಿದ್ದ ನಿಸ್ವಾರ್ಥ ಸೇವೆಗೆ ಅವೇ ಅರಸಿ ಬಂದವು. ಇವರ ಅನುಪಮ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರವೇ ದೇವರಾಜ ಅರಸು ಹಾಗೂ ಕಿತ್ತೂರುರಾಣಿ ಚನ್ನಮ್ಮ ಪ್ರಶಸ್ತಿ ನೀಡಿ ಗೌರವಿಸಿತ್ತು. ೨೦೧೩ ರಲ್ಲಿ ಕೇಂದ್ರ ಸಾಮಾಜಿಕ ಸಬಲೀಕರಣ ಹಾಗೂ ಉದ್ಯೋಗ ಇಲಾಖೆಯ ವಯೋಶ್ರೇಷ್ಠ ಸಮ್ಮಾನ್ ಪ್ರಶಸ್ತಿಯೂ ದೊರಕಿತ್ತು. ಇವರು ಸಮಾಜಕ್ಕೆ ಸಲ್ಲಿಸಿದ ನಿಸ್ವಾರ್ಥ ಸೇವೆಯನ್ನು ಮನಗೊಂಡು ಕೇಂದ್ರ ಸರ್ಕಾರ ಭಾರತದ ಅತ್ಯುನ್ನತ ನಾಗರಿಕ ಪ್ರಶಸ್ತಿಯಾದ 'ಪದ್ಮಶ್ರೀ'ಯನ್ನು ನೀಡಿ ಗೌರವಿಸಿತು. ನಾಡಿನ ವಿವಿಧ ಸಂಘ ಸಂಸ್ಥೆಗಳು ನೀಡಿದ ಸನ್ಮಾನಗಳಿಗೆ ಭಾಜನರಾಗಿದ್ದರು. ಡಿಸೆಂಬರ್ ೨೬ ರಂದು ತುಮಕೂರಿನಲ್ಲಿ ಸಕಲ ಸರ್ಕಾರಿ ಗೌರವದೊಂದಿಗೆ ಅವರ ಅಂತ್ಯಕ್ರಿಯೆ ನೆರವೇರಿತು. ಭಾರತದ ಪ್ರಧಾನ ಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು ಡಿಸೆಂಬರ್ ೩೦ ರಂದು ಆಕಾಶವಾಣಿ ಮನ್‌ಕಿ ಬಾತ್ ಕಾರ್ಯಕ್ರಮದಲ್ಲಿ ಶ್ರೀಮತಿ ನರಸಮ್ಮನವರ ನಿಸ್ವಾರ್ಥ ಸೇವೆಯನ್ನು ಸ್ಮರಿಸಿದುದು ಅವರ ಸೇವೆಗೆ ಸಂದ ಮಹೋನ್ನತ ಗೌರವವಾಗಿದೆ.

ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಅವರ ಕುಟುಂಬದವರಿಗೆ ಸಿದ್ಧಗಂಗಾ ಗುರುಪರಂಪರೆ ನೀಡಲೆಂದು ಪ್ರಾರ್ಥಿಸುತ್ತದೆ.



ಶರಣಾಂಜಲಿ

# ಶ್ರೀಮತಿ ಸರ್ವಮಂಗಳರವರು ಲಿಂಗೈಕ್ಯ



ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆ, ವೀರಶೈವ ಸಹಕಾರ ಬ್ಯಾಂಕಿನ ಅಧ್ಯಕ್ಷರೂ, ಸಮಾಜದ ಮುಖಂಡರೂ, ಭಾರತೀಯ ಜನತಾ ಪಕ್ಷದ ನಾಯಕರೂ ಆದ ಶ್ರೀ ಬಿ.ಎಸ್. ಪರಮಶಿವಯ್ಯ ಅವರ ಧರ್ಮಪತ್ನಿ ಶ್ರೀಮತಿ ಸರ್ವಮಂಗಳ ಅವರು ಡಿಸೆಂಬರ್ ೨೫ ರಂದು ಲಿಂಗೈಕ್ಯರಾದರು. ಅವರಿಗೆ ೭೭ ವರ್ಷವಾಗಿತ್ತು. ಅವರು ಅಪಾರವಾದ ಬಂಧು ಬಳಗವನ್ನು ಅಗಲಿದ್ದಾರೆ.

ಬೆಂಗಳೂರಿನ ಮಕ್ಕಳ ಬಸವಣ್ಣ ದೇವಸ್ಥಾನದ ರಸ್ತೆಯಲ್ಲಿ ವಾಸವಾಗಿದ್ದ ಶರಣ ದಂಪತಿಗಳಾದ ಶ್ರೀ ಬಿ.ಆರ್. ವೀರಪ್ಪ ಮತ್ತು ಶ್ರೀಮತಿ ರುದ್ರಮ್ಮನವರ ಸುಪುತ್ರಿಯಾದ ಸರ್ವಮಂಗಳ ಅವರು ಶ್ರೀ ಬಿ.ಎಸ್. ಪರಮಶಿವಯ್ಯನವರನ್ನು ಕೈಹಿಡಿಯುವುದರ ಮೂಲಕ ಅವರ ಬಾಳಿಗೆ ಬೆಳಕಾದರು. ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ವೃತ್ತಿ ಜೀವನವನ್ನು ಆರಂಭಿಸಿದ ಶ್ರೀಮತಿ ಸರ್ವಮಂಗಳ ಅವರು ಕೆಲವು ವರ್ಷಗಳ ನಂತರ ಕೆಲಸಕ್ಕೆ ವಿದಾಯ ಹೇಳಿ ತಮ್ಮ ಪತಿ ಶ್ರೀ ಬಿ.ಎಸ್. ಪರಮಶಿವಯ್ಯನವರು ಆರಂಭಿಸಿದ ಸರ್ವಜ್ಞ ವಾಣಿಜ್ಯ ಶಾಲೆಯ ಅಭಿವೃದ್ಧಿಯಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ರಾಜ್ಯದಲ್ಲಿಯೇ ಅತ್ಯುತ್ತಮ್ಮ ವಾಣಿಜ್ಯ ಶಾಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗುವಂತೆ ಮಾಡುವಲ್ಲಿ ಅವರ ಪರಿಶ್ರಮ ಅನನ್ಯವಾದುದು.

ಶ್ರೀ ಬಿ.ಎಸ್. ಪರಮಶಿವಯ್ಯ ಮತ್ತು ಶ್ರೀಮತಿ ಸರ್ವಮಂಗಳ ದಂಪತಿಗಳಿಗೆ ಮೂರು ಜನ ಮಕ್ಕಳು. ಎರಡು ಹೆಣ್ಣು ಒಂದು ಗಂಡು. ಹಿರಿಯ ಮಗಳು ಡಾ. ಬಿ.ಪಿ. ಮಧುಮತಿ ಅವರು ಸರ್ವಜ್ಞ ಸಂಸ್ಥೆ ನಡೆಸುತ್ತಿರುವ ಬಿ.ಎಡ್. ಕಾಲೇಜಿನ ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಎರಡನೇ ಮಗಳು ಡಾ. ಬಿ.ಪಿ. ರೇಣು ಅವರು ವೃತ್ತಿಯಲ್ಲಿ ವೈದ್ಯರಾಗಿದ್ದು ಕತಾರ್(ದೋಹಾ) ನಲ್ಲಿ ತಮ್ಮ ವೈದ್ಯ ಪತಿಯೊಂದಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಮಗ ಶ್ರೀ ಬಿ.ಪಿ. ಮಹದೇವ ಪ್ರಸಾದ್ ಸರ್ವಜ್ಞನ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ಶ್ರೀಮತಿ ಸರ್ವಮಂಗಳ ಅವರು ಸರಳತೆ, ಸಜ್ಜನಿಕೆ, ಹೃದಯವಂತಿಕೆಯನ್ನು ಮೈಗೂಡಿಸಿಕೊಂಡಿದ್ದ ಅವರು ಪತಿಗೆ ತಕ್ಕ ಸತಿಯಾಗಿ, ಮಕ್ಕಳಿಗೆ ಮಮತೆಯ ತಾಯಿಯಾಗಿ, ಮೈದುನ, ನಾದಿನಿಯರಿಗೆ ಅಕ್ಕರೆಯ ಪ್ರೀತಿಯ ಅತ್ತಿಗೆಯಾಗಿ ಎಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದರು. ಅತಿಥಿ ಸತ್ಕಾರ ಅವರ ಜೀವನದ ಉಸಿರಾಗಿತ್ತು. ಅವರ ದೊಡ್ಡಗುಣವೆಂದರೆ ಬೇರೆಯವರಿಗೆ ಸಹಾಯ ಮಾಡುವಲ್ಲಿ ಸಂತೋಷಪಡುತ್ತಿದ್ದರು. ಪರಮ ದೈವಭಕ್ತೆಯಾಗಿದ್ದ ಶ್ರೀಮತಿ ಸರ್ವಮಂಗಳ ಅವರು ಇಷ್ಟಲಿಂಗವನ್ನು ಕೈಯಲ್ಲಿಟ್ಟುಕೊಂಡು ನಿರ್ಮಲ ಮನಸ್ಸಿನಿಂದ ಬೇಡುತ್ತಿದ್ದುದು "ಅಂಗೈ ಒಳಗಿರುವೋ ಲಿಂಗಮೂರುತಿ ಸ್ವಾಮಿ, ಮಂಗಳಾರತಿಯ ನಾ ಬೆಳಗಿ ಬೇಡುವೆ ಮಾರಾಯ್ರ ಮುಂದೆ ಮರಣಾವ." ಅವರು ಕೈಹಿಡಿದು ತಮ್ಮ ಬದುಕಿಗೆ ಒಂದು ಪರಿಪೂರ್ಣತೆಯನ್ನು ತಂದುಕೊಟ್ಟ ಬಾಳಸಂಗಾತಿಯ ಮುಂದೆ ಮರಣವನ್ನು ಕೊಡುವಂತೆ ಬೇಡಿದರು. ಅವರು ಭಕ್ತಿಪೂರ್ವಕವಾದ ಹೃದಯ ನಿವೇದನೆಗೆ ದಯಮಯನಾದ ಪರಶಿವನೂ ಸ್ಪಂದಿಸಿ ಮುತ್ತೈದೆ ಭಾಗ್ಯವನ್ನು ಕರುಣಿಸಿದ.

ಅವರ ಅಂತಿಮ ದರ್ಶನವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರೂ ಸೇರಿದಂತೆ ಅನೇಕ ಮಠಗಳ ಹರಗುರು ಚರಮೂರ್ತಿಗಳು, ಗಣ್ಯರು, ಬಂಧುಗಳು, ಅಭಿಮಾನಿಗಳು ಪಡೆದರು. ಮೃತರ ಆತ್ಮಕ್ಕೆ ಶಾಂತಿಯನ್ನು, ಅವರ ಕುಟುಂಬದವರಿಗೆ ಅವರ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ಬಸವಾದಿ ಶರಣರು, ಶ್ರೀ ಸಿದ್ಧಗಂಗಾ ಗುರುಪರಂಪರೆ ನೀಡಲೆಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

ಕ್ಷೇತ್ರವಾರ್ತೆ

# ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ೬೪ನೇ ವಾರ್ಷಿಕ ಮಹಾಧಿವೇಶನ

ಕರ್ನಾಟಕದಲ್ಲಿಯೇ ಅತ್ಯಧಿಕ ಸದಸ್ಯರನ್ನೊಳಗೊಂಡ ಸಂಘ ಎಂಬ ಹೆಗ್ಗಳಿಕೆಗೆ ಪಾತ್ರವಾಗಿರುವ ತ್ರಿವಿಧ ದಾಸೋಹಿ, ಕರ್ನಾಟಕ ರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಾಶೀರ್ವಾದದ ಮುಂಬೆಳಕಿನಲ್ಲಿ ವರ್ಷದಿಂದ ವರ್ಷಕ್ಕೆ ಸಾಧನೆಗಳ ಹೆಜ್ಜೆ ಗುರುತನ್ನು ಮೂಡಿಸುತ್ತಾ ಬಂದಿರುವ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಡಿಸೆಂಬರ್ ೨೩ ರಂದು ತನ್ನ ೬೪ನೇ ವಾರ್ಷಿಕ ಮಹಾಧೀವೇಶನ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಶಿಸ್ತುಬದ್ಧವಾಗಿ, ಅರ್ಥಪೂರ್ಣವಾಗಿ ನಡೆಯಿತು.



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಮಹಾಧಿವೇಶನದ ಉದ್ಘಾಟನೆ

ಈ ಮಹಾಧಿವೇಶನದಲ್ಲಿ ಸಂಘ ಹಲವಾರು ವರ್ಷಗಳಿಂದ ಕೊಡಮಾಡುತ್ತಾ ಬಂದಿರುವ 'ಸಿದ್ಧಗಂಗಾಶ್ರೀ', 'ಸಿದ್ಧಗಂಗಾ ಶಿವಕುಮಾರಶ್ರೀ', 'ಸಂಘಶ್ರೀ' ಪ್ರಶಸ್ತಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮ, ಕಳೆದು ಒಂದು ವರ್ಷದ ಅವಧಿಯಲ್ಲಿ ಸಂಘ ಮಾಡಿದ ಸಾಧನೆಯ ಅವಲೋಕನ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು. ಸಂಘದ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅನುಪಸ್ಥಿತಿ ಎದ್ದು ಕಾಣುತ್ತಿತ್ತು. ಹಳೆಯ ವಿದ್ಯಾರ್ಥಿಗಳು, ಹಿತೈಷಿಗಳು, ಅಭಿಮಾನಿಗಳ ಮನಸ್ಸಿನಲ್ಲಿ ಮೋಡಕವಿದ ವಾತಾವರಣ ಮನೆ ಮಾಡಿಕೊಂಡಿತ್ತು.

ಜ್ಯೋತಿ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿ, ಭಾಲ್ಕಿಮಠದ ಪೂಜ್ಯ ಡಾ. ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರಿಗೆ ಪ್ರಸಕ್ತ ಸಾಲಿನ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು, ಡಾ. ಪ್ರದೀಪ್‌ಕುಮಾರ ಹೆಬ್ರಿ ಹಾಗೂ ಶ್ರೀಮತಿ ಲೋಕೇಶ್ವರಿ ಪ್ರಭು ಅವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ, ಶ್ರೀ ಬಿ.ಎಲ್. ಸಿದ್ಧಯ್ಯ, ಶ್ರೀ ಎಚ್.ವಿ. ರಾಜಣ್ಣ, ಉದ್ಯಮಿ ಶ್ರೀ ಯಂಕಯ್ಯಶೆಟ್ಟಿ, ಪತ್ರಿಕೋದ್ಯಮಿ ಶ್ರೀ ಚನ್ನಬಸಯ್ಯ ಗುರುವಿನವರು ಹಾಗೂ ಶ್ರೀ ಈಶ್ವರಸಿಂಗ್ ಅವರಿಗೆ 'ಸಂಘಸಿರಿ' ಪ್ರಶಸ್ತಿಯನ್ನು ಪ್ರದಾನ ಮಾಡಿದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ "ಪರಮಪೂಜ್ಯ ಗುರುಗಳಾದ ಶಿವಕುಮಾರ ಮಹಾಸ್ವಾಮಿಗಳವರನ್ನು ಅನಾರೋಗ್ಯದ ಹಿನ್ನೆಲೆಯಲ್ಲಿ ಭಕ್ತರು ಅವರನ್ನು ಭೇಟಿ ಮಾಡಲು ಅವಕಾಶವಿಲ್ಲ. ನಿಮ್ಮೆಲ್ಲರ ಪ್ರಾರ್ಥನೆಯೊಂದಿಗೆ ಶ್ರೀಗಳು ಬೇಗ ಗುಣಮುಖರಾಗಲಿದ್ದಾರೆ. ಹಲವಾರು ವರ್ಷಗಳಿಂದ ಪ್ರತಿವರ್ಷ ಮಹಾಧಿವೇಶನ ಕಾರ್ಯಕ್ರಮದ ನೆಪದಲ್ಲಿ ಎಲ್ಲಾ ಹಳೆಯ ವಿದ್ಯಾರ್ಥಿಗಳು ಒಂದೆಡೆ ಸೇರಿ ಪೂಜ್ಯರ ದರ್ಶನ ಭಾಗ್ಯ ಪಡೆಯಲು ಆಗಮಿಸುತ್ತಾರೆ. ಈ



ಶ್ರೀಮತಿ ಲೋಕೇಶ್ವರಿ ಪ್ರಭು ಅವರಿಗೆ 'ಸಿದ್ಧಗಂಗಾ ಶಿವಕುಮಾರಶ್ರೀ' ಪ್ರಶಸ್ತಿ ಪ್ರದಾನ



## 'ಸಂಘಸಿರಿ' ಪ್ರಶಸ್ತಿ ಪ್ರದಾನ



ಶ್ರೀ ಬಿ.ಎಲ್. ಸಿದ್ಧಯ್ಯನವರು



ಶ್ರೀ ಹೆಚ್.ವಿ. ರಾಜಣ್ಣನವರು



ಶ್ರೀ ಯಂಕಯ್ಯಶೆಟ್ಟಿರವರು

ಸಮಾರಂಭ ಒಂದು ಜಾತ್ರೆಯಂತೆ ಕಂಗೊಳಿಸುತ್ತಿತ್ತು. ಪರಮಪೂಜ್ಯರು ಈ ಸಮಾರಂಭಕ್ಕೆ ಬರದೇ ಇದ್ದರೂ, ಈ ಕಾರ್ಯಕ್ರಮ ಯಶಸ್ವಿಯಾಗಲೆಂದು ಹಾರೈಸಿದ್ದಾರೆ ಎಂದು ತಿಳಿಸಿ ಪೂಜ್ಯರ ವಿಡಿಯೋ ತುಣುಕನ್ನು ಸಮಾರಂಭದಲ್ಲಿ ಪ್ರದರ್ಶಿಸಿದರು. ಈ ಕ್ಷಣದಲ್ಲಿ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಭಾವುಕರಾದರು. ಈ ದೃಶ್ಯವನ್ನು ನೋಡಿ ಸಮಾರಂಭದಲ್ಲಿದ್ದವರ ಕಣ್ಣಾಲಿಗಳಲ್ಲಿ ನೀರು ತುಂಬಿತು. ಇಡೀ ವಾತಾವರಣ ನಿಶ್ಯಬ್ದವಾಯಿತು.

ಪೂಜ್ಯ ಶ್ರೀಗಳು ತಮ್ಮ ಜೀವನವನ್ನು ಮಠ ಹಾಗೂ ಮಕ್ಕಳಿಗಾಗಿ ಮುಡುಪಾಗಿಟ್ಟು ಜೀವನದುದ್ದಕ್ಕೂ ನೋವು ನಲಿವುಗಳನ್ನು, ಕಷ್ಟ ನಷ್ಟಗಳನ್ನು ಅನುಭವಿಸಿರುವುದರಿಂದ ಅವರಿಗೆ ಶಸ್ತ್ರಚಿಕಿತ್ಸೆ ಮಾಡುವಾಗ ತಮಗಾದ ನೋವನ್ನು ತೋರಿಸಿಕೊಳ್ಳಲಿಲ್ಲ. ತಮ್ಮ ಅನಾರೋಗ್ಯವನ್ನು ಸಹ



ಶ್ರೀ ಚನ್ನಬಸಯ್ಯ ಗುರುವಿನವರು



ಶ್ರೀ ಕೆ.ಎಸ್. ಈಶ್ವರಸಿಂಗ್‌ರವರು

ಲೆಕ್ಕಿಸದೆ ಮಕ್ಕಳ ಬಗ್ಗೆ ಆಲೋಚಿಸುತ್ತಿದ್ದರು. ಅಲ್ಲದೆ ಶ್ರೀಮಠಕ್ಕೆ ಯಾರೇ ಬಂದರೂ ಮೊದಲು ಪ್ರಸಾದ ಸೇವಿಸುವಂತೆ ಸಲಹೆ ನೀಡುತ್ತಿದ್ದರು. ಇತ್ತೀಚೆಗೆ ಶ್ರೀಗಳನ್ನು ಭೇಟಿ ಮಾಡಲು ಬಂದಿದ್ದ ವಿವಿಧ ಮಠಾಧೀಶರಿಗೂ ಹಾಗೂ ಗಣ್ಯರಿಗೂ ದರ್ಶನ ನೀಡಿ ಪ್ರಸಾದ ಸೇವಿಸಲು ಹೇಳುತ್ತಿದ್ದರು. ಅವರಿಗೆ ನಿತ್ಯ ಪ್ರಸಾದ ವಿತರಣೆ ಮಾಡುವುದೇ ಮೂಲ ಮಂತ್ರವಾಗಿತ್ತು ಎಂದು ಭಾವುಕರಾಗಿ ತಿಳಿಸಿದರು.

ಪೂಜ್ಯರು ಎಂದೂ ತಮ್ಮ ಯೋಗಕ್ಷೇಮವನ್ನು ಬಯಸಿದವರಲ್ಲ, ಪ್ರತಿಕ್ಷಣ ಮಠದ ಬಗ್ಗೆ ಹಾಗೂ ಮಕ್ಕಳ ಯೋಗಕ್ಷೇಮದ ಬಗ್ಗೆ ಯೋಚಿಸಿದವರು. ಪ್ರಸಾದ ಮತ್ತು ಪೂಜೆಗೆ ಪ್ರಾಮುಖ್ಯ ನೀಡುತ್ತಾ ಬಂದಿದ್ದಾರೆ.

'ಸಿದ್ಧಗಂಗಾಶ್ರೀ' ಪ್ರಶಸ್ತಿಯು ಒಂದು ಲಕ್ಷ ರೂ. ನಗದು, ಪ್ರಶಸ್ತಿ ಪತ್ರ ಹಾಗೂ ಸ್ಮರಣಿಕೆಯನ್ನೊಳಗೊಂಡಿದೆ.

'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಸ್ವೀಕರಿಸಿ ಮಾತನಾಡಿದ ಪೂಜ್ಯ ಡಾ. ಶ್ರೀ ಶ್ರೀ ಬಸವಲಿಂಗ ಪಟ್ಟದ್ದೇವರು "ಭಾಲ್ಕಿ ಮಠಕ್ಕೆ ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೂ ಅವಿನಾಭಾವ ಸಂಬಂಧವಿದೆ. ಪೂಜ್ಯ ಶ್ರೀಗಳು ನಮ್ಮ ಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ಅಶೀರ್ವದಿಸಿದ್ದಾರೆ. ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿಯವರು ವಿವಿಧ ರೀತಿಯ ದಾಸೋಹ ಸೇವೆ ಮೂಲಕ ವಿಶ್ವಕ್ಕೆ ಮಾದರಿ ಕೆಲಸ ಮಾಡಿದ್ದಾರೆ. ಇದರ ಉಪಯೋಗವನ್ನು ಲಕ್ಷಾಂತರ ಜನರು ಪಡೆಯುತ್ತಿದ್ದಾರೆ. ಸಿದ್ಧಗಂಗಾ ಮಠದಲ್ಲಿ ಬಸವ ತತ್ತ್ವದ ಅಡಿಯಲ್ಲಿಯೇ ಸೇವೆಗಳು ನಡೆಯುತ್ತಿವೆ. ಹನ್ನೆರಡನೇ ಶತಮಾನದಲ್ಲಿ ಇದ್ದ ವಾತಾವರಣ, ಭಕ್ತಿ, ಸಮಾಜ ಸೇವೆಯನ್ನು ಇಂದು



ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಬರೆದ 'ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು" ಕೃತಿ ಲೋಕಾರ್ಪಣೆ

ಸಿದ್ಧಗಂಗಾ ಮಠದಲ್ಲಿ ಕಾಣಬಹುದು. ಇದು ಶ್ರೀ ಶಿವಕುಮಾರ ಸ್ವಾಮೀಜಿ ಅವರ ಆಶೀರ್ವಾದಿಂದ ನಡೆಯುತ್ತಿದೆ" ಎಂದು ಪ್ರಶಂಸಿಸಿದರು.

೧೦ ಸಾವಿರ ರೂ. ನಗದು, ಪ್ರಶಸ್ತಿಪತ್ರ ಹಾಗೂ ಸ್ಮರಣಿಕೆಯುನ್ನೊಳಗೊಂಡ "ಸಿದ್ಧಗಂಗಾ ಶಿವಕುಮಾರಶ್ರೀ" ಪ್ರಶಸ್ತಿಯನ್ನು ಸ್ವೀಕರಿಸಿ ಮಾತನಾಡಿದ ಡಾ. ಪ್ರದೀಪ್‌ಕುಮಾರ ಹೆಬ್ರಿ ಹಾಗೂ ಶ್ರೀಮತಿ ಲೋಕೇಶ್ವರಿ ಪ್ರಭು ಅವರು ಪರಮಪೂಜ್ಯ ಶ್ರೀಗಳವರು ಸಮಾಜಕ್ಕೆ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಸ್ಮರಿಸಿದರು. ಇದೇ ಸಂದರ್ಭದಲ್ಲಿ ಹಿರಿಯ ಜಾನಪದ ವಿದ್ವಾಂಸರೂ, ಸಾಹಿತಿಗಳೂ, ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಬರೆದ 'ಕರ್ನಾಟಕ ರತ್ನ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು' ಕೃತಿಯ ಪರಿಷ್ಕೃತ ಮರುಮುದ್ರಣ ವನ್ನು ಭಾಲ್ಕಿಯ ಹಿರೇಮಠ ಸಂಸ್ಥಾನ ಮಠಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಬಸವಲಿಂಗ ಪಟ್ಟದ್ದೇವರು ಅವರು ಲೋಕಾರ್ಪಣೆ ಮಾಡಿದರು. ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿ ಗಳವರು ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರನ್ನು ಸನ್ಮಾನಿಸಿ ಆಶೀರ್ವದಿಸಿದರು.



ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪನವರಿಂದ ಪ್ರಾಸ್ತಾವಿಕ ನುಡಿ



ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರಿಂದ ಸಂಘದ ವಾರ್ಷಿಕ ವರದಿ



## ಪ್ರತಿಭಾ ಪುರಸ್ಕಾರ



ಕು|| ಯೋಗಾನಂದಿನಿ, ಎಸ್.ಬಿ.ಪಿ.ಎಸ್. (ಸಿಬಿಎಸ್‌ಸಿ)



ಕು|| ಆದಿತಿ ಆರ್.ಎಸ್., (ಎಸ್.ಎಸ್.ಆರ್.ಹೆಚ್.ಎಸ್.ಎಸ್.)



ಕು|| ಭಾನುಶ್ರೀ, (ಎಸ್.ಎಸ್.ಇ.ಎಂ.ಹೆಚ್.ಎಸ್.)



ಚಿ|| ಲಕ್ಷ್ಮೀಕಾಂತ .ಇ.ಬಿ., (ಎಸ್.ಎಸ್.ಆರ್.ಹೆಚ್.ಎಸ್.)

ಪ್ರಸಕ್ತ ಸಾಲಿನ ರಾಜ್ಯ ಶಿಕ್ಷಕ ಪ್ರಶಸ್ತಿಯನ್ನು ಪಡೆದ ಸನಿವಾಸ ಪ್ರೌಢಶಾಲೆಯ ಸಹ ಶಿಕ್ಷಕರಾದ ಶ್ರೀ ಹರಳೂರು ಶಿವಕುಮಾರ ಹಾಗೂ 'ಶಿವಕುಮಾರ ಶ್ರೀ' ದತ್ತಿ ಪ್ರಶಸ್ತಿ ಪ್ರಾಯೋಜಕರಾದ ಸಮಾಜ ಸೇವಕ ಶ್ರೀಮತಿ ಶಕುಂತಲಾ ಜಯದೇವ್ ಹಾಗೂ ಪ್ರತಿಭಾ ಪುರಸ್ಕಾರ ದಾನಿಗಳಾದ ಡಾ. ಬಿ.ಎನ್. ಸಿದ್ಧರಾಮಯ್ಯ ಅವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು. ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅತ್ಯಧಿಕ ಅಂಕಗಳನ್ನು ಪಡೆದ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ನಗದು ಬಹುಮಾನ ಹಾಗೂ ಪ್ರಶಸ್ತಿ ಪತ್ರವನ್ನು ವಿತರಿಸಲಾಯಿತು.

ಪ್ರಸ್ತುತ ಸಾಲಿನಲ್ಲಿ ನಮ್ಮನಗಲಿದ ಸಂಘದ ಸದಸ್ಯರಿಗೆ ಒಂದು ನಿಮಿಷ ಮೌನವನ್ನು ಆಚರಿಸುವುದರ ಮೂಲಕ ಅವರ ಆತ್ಮಕ್ಕೆ ಶ್ರದ್ಧೆಯನ್ನು ಕೋರಲಾಯಿತು.

ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ಕಾರ್ಯದರ್ಶಿಗಳಾದ ಶ್ರೀ ಕೆ.ಎಚ್. ಶಿವರುದ್ರಯ್ಯನವರು ಸಂಘದ ವಾರ್ಷಿಕ ವರದಿ ಹಾಗೂ ಶ್ರೀ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ನ ವರದಿಯನ್ನು, ಪ್ರೊ. ಬಿ. ಗಂಗಾಧರಯ್ಯನವರು ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ವಾರ್ಷಿಕ ವರದಿ ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ವರದಿಯನ್ನು ಶ್ರೀ ಕೆ.ಬಿ. ಶಿವಶಂಕರಯ್ಯ ಅವರು ಮಂಡಿಸಿ ಸಭೆಯ ಅನುಮೋದನೆ ಪಡೆದರು. ಇದೇ ಸಂದರ್ಭದಲ್ಲಿ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರ ಮನವಿಗೆ ಸ್ಪಂದಿಸಿ ಶ್ರೀ ಗುರುಕುಲ ಡೆವಲೆಪ್‌ಮೆಂಟ್ ಟ್ರಸ್ಟ್‌ಗೆ ಸಭೆಯಲ್ಲಿಯೇ ಅನೇಕರು ಮುಕ್ತಮನಸ್ಸಿನಿಂದ ಆರ್ಥಿಕ ನೆರವು ನೀಡಿದರು.

ಕಾರ್ಯಕ್ರಮ ಶ್ರೀ ಎನ್.ಆರ್. ಜ್ಞಾನಮೂರ್ತಿ ಅವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ. ಎಂ.ಎನ್. ಚನ್ನಬಸಪ್ಪ ಅವರು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಕೊನೆಯಲ್ಲಿ ಶ್ರೀ ಕೆ.ಬಿ. ಶಿವಶಂಕರಯ್ಯ ಅವರು ಶರಣು ಸಮರ್ಪಣೆ ಮಾಡಿದರು.

ವರದಿ : ಕೆ.ಬಿ. ಶಿವಶಂಕರಯ್ಯ

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೪೦೮. | ಶ್ರೀ ಹೆಚ್.ಎಂ. ಬಸಪ್ಪ<br>ಟಿ. ದಾಸರಹಳ್ಳಿ | ೨,೦೦೧ |
| ೨೪೦೯. | ಶ್ರೀಮತಿ ನಿರ್ಮಲ ರುದ್ರಸ್ವಾಮಿ<br>ಯಲಹಂಕ | ೧೦,೧೧೨ |
| ೨೪೧೦. | ಶ್ರೀ ಎನ್.ಬಿ. ಹರೀಶ್<br>ನಾಗಶೆಟ್ಟಿಹಳ್ಳಿ | ೨,೦೦೦ |
| ೨೪೧೧. | ಶ್ರೀಮತಿ ಶಾರದ ಬಸವರಾಜ್<br>ಚಿಕ್ಕಪೆರಸಲಗಿ | ೫೦೦ |
| ೨೪೧೨. | ಶ್ರೀ ಪರ್ವತ ಮಲ್ಲೇಗೌಡ<br>ರಾಮದೇವರಹಳ್ಳಿ | ೧,೦೦೫ |
| ೨೪೧೩. | ಶ್ರೀ ವಿಶ್ವಾಸ್<br>ಚಿಕ್ಕಮಗಳೂರು | ೫೦೦ |
| ೨೪೧೪. | ಶ್ರೀ ಎಸ್. ಶಿವಣ್ಣ<br>ಜಿ. ಬಮ್ಮಸಂದ್ರ | ೫೦೦ |
| ೨೪೧೫. | ಶ್ರೀ ಸಿ. ಮಹದೇವಯ್ಯ<br>ಆರ್.ಜಿ. ಕೊಪ್ಪಳು | ೫,೦೦೧ |
| ೨೪೧೬. | ಶ್ರೀ ಬಸವರಾಜಪ್ಪ<br>ತಲಕಲ್ಲ | ೫೦೧ |
| ೨೪೧೭. | ಶ್ರೀ ಪುಟ್ಟರಾಜು<br>ಗುಡುಗೇನಹಳ್ಳಿ | ೨,೦೦೦ |
| ೨೪೧೮. | ಶ್ರೀ ಮುರುಳೀಕೃಷ್ಣ ಚೌಧರಿ<br>ಚಿಕ್ಕಬಳ್ಳಾಪುರ | ೧,೧೧೬ |
| ೨೪೧೯. | ಶ್ರೀ ಎನ್. ಶಶಿಕುಮಾರ<br>ಎಲೆಕ್ಟ್ರಾನಿಕ್ಸ್ ನಗರ | ೫೦೦ |
| ೨೪೨೦. | ಶ್ರೀ ಜಿ.ಎಂ. ಗುರುದೇವ್ ಪ್ರಕಾಶ್<br>ಬೆಂಗಳೂರು | ೨,೫೦೦ |
| ೨೪೨೧. | ಡಾ॥ ಸಂಕೇತ್<br>ಮಳವಳ್ಳಿ | ೨,೦೦೦ |
| ೨೪೨೨. | ಶ್ರೀಮತಿ ನಾಗಮಣಿ<br>ಬೆಳಕವಾಡಿ | ೫೦೦ |
| ೨೪೨೩. | ಶ್ರೀ ಕಾಂತರಾಜು<br>ಲಕ್ಕನಹಳ್ಳಿ | ೫೦೦ |
| ೨೪೨೪. | ಶ್ರೀ ಬಿಲ್ವಶ್ರೀ<br>ಹಾಸನ | ೫೦೧ |
| ೨೪೨೫. | ಶ್ರೀ ಪ್ರಭು ನಿತಿನ್<br>ಚಿಕ್ಕಮಗಳೂರು | ೫೦೧ |
| ೨೪೨೬. | ಶ್ರೀ ಎಂ. ಶಿವಸ್ವಾಮಿ<br>ಮಡವಾಡಿ | ೧೦೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೪೨೭. | ಶ್ರೀ ವಿಜಯಪುರ ರೋಟರಿ ಟ್ರಸ್ಟ್<br>ವಿಜಯಪುರ | ೧,೧೧,೦೦೦ |
| ೨೪೨೮. | ಶ್ರೀಮತಿ ಗಂಗಮ್ಮ ಮತ್ತು ಶ್ರೀಮತಿ ಸುಜಾತ ತ್ರಯಂಭಕ<br>ಬೆಂಗಳೂರು | ೨,೦೦,೦೦೦ |
| ೨೪೨೯. | ಶ್ರೀ ಜಿ.ಎನ್. ಪ್ರಕಾಶ್‌ಕುಮಾರ್<br>ತಿಪಟೂರು | ೧,೧೦೧ |
| ೨೪೩೦. | ಶ್ರೀ ತುಳಸೀರಾಮಯ್ಯ<br>ಬೆಂಗಳೂರು | ೩೭೯೫ |
| ೨೪೩೧. | ಶ್ರೀ ಹೆಚ್. ಚಂದ್ರಣ್ಣ<br>ಸನಿಕೆರೆ | ೨೦೦೦ |
| ೨೪೩೨. | ಶ್ರೀಮತಿ ಶೀಲಾ ಮತ್ತು ಹೆಚ್.ಎಸ್. ಪ್ರಕಾಶ್‌ಕುಮಾರ್<br>ಬೆಂಗಳೂರು | ೫೦೦೦ |
| ೨೪೩೩. | ಶ್ರೀ ಅಶೋಕ್ ಬಿರಾದಾರ್<br>ಬೆಂಗಳೂರು | ೫೦೦೦ |
| ೨೪೩೪. | ಶ್ರೀ ಎ.ಎಸ್. ಸದಾಶಿವಯ್ಯ<br>ಬೆಂಗಳೂರು | ೨೫,೦೦೦ |
| ೨೪೩೫. | ಶ್ರೀ ಕಲೋನಲ್ ಮಲ್ಲಿಕಾರ್ಜುನ<br>ಬೆಂಗಳೂರು | ೨೦೦೧ |
| ೨೪೩೬. | ಶ್ರೀಮತಿ ನಿರ್ಮಲ ಮತ್ತು ಸ್ಮರಣಾರ್ಥ<br>ಹೆಚ್.ಎಸ್. ಶಿವರುದ್ರಪ್ಪ, ಹೆಚ್.ಎಸ್. ಪ್ರವೀಣ್‌ಕುಮಾರ್<br>ಬೆಂಗಳೂರು | ೨೦,೦೦೦ |
| ೨೪೩೭. | ಶ್ರೀ ಪ್ರದೀಪ್ ಪಾಲಾಕ್ಷ<br>ಬೆಂಗಳೂರು | ೨೦೦೦ |
| ೨೪೩೮. | ಶ್ರೀ ಕೆ.ಬಿ. ನಂಗೇಗೌಡ<br>ಬೆಂಗಳೂರು | ೧೦,೦೦೦ |
| ೨೪೩೯. | ಶ್ರೀ ಸಿ.ಕೆ. ಸಿದ್ಧಪ್ಪ<br>ದಾವಣಗೆರೆ | ೩೬,೫೦೦ |
| ೨೪೪೦. | ಶ್ರೀ ಹೆಚ್.ಸಿ. ಸಿದ್ಧಪ್ಪ<br>ಬೆಂಗಳೂರು | ೨೧೦೧ |
| ೨೪೪೧. | ಶ್ರೀ ಕರಣ್ ಮತ್ತು ಕುಟುಂಬ<br>ಬೆಂಗಳೂರು | ೧೫೦೦ |
| ೨೪೪೨. | ಶ್ರೀಮತಿ ಮಂಜುಳ<br>ಬೆಂಗಳೂರು | ೧೦,೦೦೦ |
| ೨೪೪೩. | ಶ್ರೀ ಕೆ. ಬಸವರಾಜು<br>ಬಳ್ಳಾರಿ | ೧೦೦೧ |

(ಮುಂದುವರೆಯುತ್ತದೆ)

## ದಿನದರ್ಶಿ 2019



### ಜನವರಿ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | | |

### ಫೆಬ್ರವರಿ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | | |

### ಮಾರ್ಚ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 31 | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

### ಏಪ್ರಿಲ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | | | | |

### ಮೇ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | 1 | 2 | 3 | 4 |
| 5 | 6 | 7 | 8 | 9 | 10 | 11 |
| 12 | 13 | 14 | 15 | 16 | 17 | 18 |
| 19 | 20 | 21 | 22 | 23 | 24 | 25 |
| 26 | 27 | 28 | 29 | 30 | 31 | |

### 2019ನೇ ವರ್ಷದ ಸರ್ಕಾರಿ ರಜಾ ದಿನಗಳು

| ತಿಂಗಳು | ದಿನಾಂಕ | ವಾರ | ರಜಾ |
|---|---|---|---|
| ಜನವರಿ | 15 | ಮಂ | ಮಕರ ಸಂಕ್ರಾಂತಿ |
| | 26 | ಶನಿ | ಗಣರಾಜ್ಯೋತ್ಸವ |
| ಮಾರ್ಚ್ | 4 | ಮಂ | ಮಹಾಶಿವರಾತ್ರಿ |
| ಏಪ್ರಿಲ್ | 6 | ಶನಿ | ಚಾಂದ್ರಮಾನ ಯುಗಾದಿ |
| | 14 | ಭಾನು | ಅಂಬೇಡ್ಕರ್ ಜಯಂತಿ |
| | 17 | ಬುಧ | ಮಹಾವೀರ ಜಯಂತಿ |
| | 19 | ಶುಕ್ರ | ಗುಡ್ ಫ್ರೈಡೇ |
| ಮೇ | 1 | ಬುಧ | ಕಾರ್ಮಿಕರ ದಿನಾಚರಣೆ |
| | 7 | ಮಂ | ಬಸವೇಶ್ವರ ಜಯಂತಿ |
| ಜೂನ್ | 5 | ಬುಧ | ರಂಜಾನ್ |
| ಆಗಸ್ಟ್ | 12 | ಸೋ | ಬಕ್ರೀದ್ |
| | 15 | ಗುರು | ಸ್ವಾತಂತ್ರ್ಯ ದಿನಾಚರಣೆ |
| ಸೆಪ್ಟೆಂಬರ್ | 2 | ಸೋ | ಗಣೇಶ ಚತುರ್ಥಿ |
| | 10 | ಮಂ | ಮೊಹರಂ ಕಡೇದಿನ |
| | 28 | ಶನಿ | ಮಹಾಲಯ ಅಮಾವಾಸ್ಯೆ |
| ಅಕ್ಟೋಬರ್ | 2 | ಬುಧ | ಗಾಂಧಿ ಜಯಂತಿ |
| | 7 | ಸೋ | ಆಯುಧಪೂಜೆ |
| | 8 | ಮಂ | ವಿಜಯದಶಮಿ |
| | 13 | ಭಾನು | ವಾಲ್ಮೀಕಿ ಜಯಂತಿ |
| | 27 | ಭಾನು | ನರಕ ಚತುರ್ಥಿ |
| | 29 | ಮಂ | ದೀಪಾವಳಿ |
| ನವೆಂಬರ್ | 1 | ಶುಕ್ರ | ಕನ್ನಡ ರಾಜ್ಯೋತ್ಸವ |
| | 10 | ಭಾನು | ಈದ್-ಮಿಲಾದ್ |
| | 15 | ಶುಕ್ರ | ಕನಕದಾಸ ಜಯಂತಿ |
| ಡಿಸೆಂಬರ್ | 25 | ಬುಧ | ಕ್ರಿಸ್‌ಮಸ್ |

### ಜೂನ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 30 | | | | | | 1 |
| 2 | 3 | 4 | 5 | 6 | 7 | 8 |
| 9 | 10 | 11 | 12 | 13 | 14 | 15 |
| 16 | 17 | 18 | 19 | 20 | 21 | 22 |
| 23 | 24 | 25 | 26 | 27 | 28 | 29 |

### ಜುಲೈ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | 1 | 2 | 3 | 4 | 5 | 6 |
| 7 | 8 | 9 | 10 | 11 | 12 | 13 |
| 14 | 15 | 16 | 17 | 18 | 19 | 20 |
| 21 | 22 | 23 | 24 | 25 | 26 | 27 |
| 28 | 29 | 30 | 31 | | | |

### ಆಗಸ್ಟ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | 1 | 2 | 3 |
| 4 | 5 | 6 | 7 | 8 | 9 | 10 |
| 11 | 12 | 13 | 14 | 15 | 16 | 17 |
| 18 | 19 | 20 | 21 | 22 | 23 | 24 |
| 25 | 26 | 27 | 28 | 29 | 30 | 31 |

### ಸೆಪ್ಟೆಂಬರ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | | | | | |

### ಅಕ್ಟೋಬರ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | 1 | 2 | 3 | 4 | 5 |
| 6 | 7 | 8 | 9 | 10 | 11 | 12 |
| 13 | 14 | 15 | 16 | 17 | 18 | 19 |
| 20 | 21 | 22 | 23 | 24 | 25 | 26 |
| 27 | 28 | 29 | 30 | 31 | | |

### ನವೆಂಬರ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| | | | | | 1 | 2 |
| 3 | 4 | 5 | 6 | 7 | 8 | 9 |
| 10 | 11 | 12 | 13 | 14 | 15 | 16 |
| 17 | 18 | 19 | 20 | 21 | 22 | 23 |
| 24 | 25 | 26 | 27 | 28 | 29 | 30 |

### ಡಿಸೆಂಬರ್ 2019

| ಭಾ | ಸೋ | ಮಂ | ಬುಧ | ಗುರು | ಶುಕ್ರ | ಶನಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 8 | 9 | 10 | 11 | 12 | 13 | 14 |
| 15 | 16 | 17 | 18 | 19 | 20 | 21 |
| 22 | 23 | 24 | 25 | 26 | 27 | 28 |
| 29 | 30 | 31 | | | | |

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102

RNI No. 17139/69





To

If undelivered please return to :
Editor
Siddaganga Monthly Magazine
Siddaganga Math
Tumkur-572 104

email ID : geetanjaligraphics@gmail.com